

# ಮಹದೇವ ಕೃತ

# ಜಾತಕತತ್ತ್ವಂ

## ಮೂಲ ಶ್ಲೋಕಗಳು - ಅರ್ಥಸಹಿತ




ಟಿ.ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್
ಬೆಂಗಳೂರು - 53

ಮಹದೇವ ಕೃತ

# ಜಾತಕತತ್ವಂ

ಮೂಲ ಶ್ಲೋಕಗಳು - ತಾತ್ಪರ್ಯ ಸಹಿತ

ಸಂಜ್ಞಾತತ್ವಂ, ಸೂತಿಕಾತತ್ವಂ, ಪ್ರಕೀರ್ಣತತ್ವಂ, ಸ್ತ್ರೀಜಾತಕತತ್ವಂ


ಗ್ರಂಥಕರ್ತರು :

ವೇದಮೂರ್ತಿ ಸಿ.ಎಸ್. ವೆಂಕಟರಾಮಾಶಾಸ್ತ್ರಿಗಳು

ಬೆಂಗಳೂರು.

ಪರಿಶೋಧಕರು :

ವೇದಮೂರ್ತಿ ಪಂಡಿತ ಅಶ್ವತ್ಥನಾರಾಯಣಶಾಸ್ತ್ರಿಗಳು

ವೇದಮೂರ್ತಿ ನಾಗೇಶ ಶಾಸ್ತ್ರಿಗಳು

ಬೆಂಗಳೂರು.



ಪ್ರಕಾಶಕರು :

ಟಿ.ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್ಸ್

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

234, ಚಿಕ್ಕಪೇಟೆ, ಬೆಂಗಳೂರು - 53

ದೂರವಾಣಿ : 2258217

ಪರಿಷ್ಕೃತ ಮುದ್ರಣ : 1999

## ವಿಷಯಾನುಕ್ರಮಣಿಕೆ





*ಮುಖಪುಟ ವಿನ್ಯಾಸ ಮತ್ತು ಡಿ.ಟಿ.ಪಿ. :*
ಇಂಪ್ರೆಸಿವ್ ಗ್ರಾಫಿಕ್ಸ್ ಅಂಡ್ ಡಿಸೈನ್ಸ್
ಗಿರಿನಗರ, ಬೆಂಗಳೂರು – 560085
ದೂರವಾಣಿ : 6722129

ಶ್ರೀರಸ್ತು

ಶ್ರೀ ಮಹಾಗಣಪತಯೇ ನಮಃ

# ೧. ಸಂಜ್ಞಾತತ್ವಂ

೧. * ಭುವನೇಶ್ವರಿ ವಿಜಯತೇ ॥

ಮೂರು ಲೋಕಕ್ಕೂ ಒಡೆಯಳಿಗೆ "ಜಯ" ಪರಾಕ್.

೨. * ಶ್ರೀ ಗುರುಗಣೇಶಾಂಬಾಚರಣಾನ್ನತ್ವಾ ಪ್ರಾಚೀನಾರ್ವಾಚೀನ ಹೋರಾತಂತ್ರಸಾರಮುದ್ಧೃತ್ಯ ಮಹಾದೇವೋ ಜಾತಕತತ್ವಂ ಕುರುತೇ ॥

ಗುರು, ಗಣೇಶ ಮತ್ತು ಪಾರ್ವತೀ ಇವರ ಚರಣಗಳಿಗೆ ನಮಸ್ಕರಿಸಿ, ಪೂರ್ವ ಮತ್ತು ಆಧುನಿಕ ಕಾಲದ ಹೋರಾಶಾಸ್ತ್ರದ ಸಾರವನ್ನು ತೆಗೆದುಕೊಂಡು "ಮಹದೇವನು" "ಜಾತಕತತ್ವವನ್ನು" ಬರೆಯುತ್ತಾನೆ.

೩. * ಮಸ್ತಕಮುಖೋರೋಹೃದುದರಕಟಿವಸ್ತಿಲಿಙ್ಗೋರು ಜಾನು ಜಂಘಾಂಘ್ರಿ ಮೇಷಾದಿತಃ ಕಾಲಾಂಗಂ ॥

ಮೇಷಾದಿಯಾಗಿ ಕಾಲಪುರುಷನ ಅಂಗಗಳಾವುವೆಂದರೆ :-

೧. ತಲೆ, ೨. ಮುಖ, ೩. ಎದೆ, ೪. ಹೃದಯ, ೫. ಹೊಟ್ಟೆ, ೬. ಸೊಂಟದ ಹಿಂಭಾಗ, ೭. ಸೊಂಟದ ಮುಂಭಾಗ, ೮. ಲಿಂಗ, ೯. ತೊಡೆಗಳು, ೧೦. ಮೊಳಕಾಲುಗಳು, ೧೧. ಕಾಲುಗಳು ಮತ್ತು ೧೨. ಪಾದಗಳು.

೪. * ಮಶುಬುಚರಬುಶುಮಶಶಗುವೋ ಮೇಷಾದೀಶಾಃ ॥

ಮಂಗಳ, ಶುಕ್ರ, ಬುಧ, ಚಂದ್ರ, ರವಿ, ಬುಧ, ಶುಕ್ರ, ಮಂಗಳ, ಗುರು, ಶನಿ–ಶನಿ, ಗುರುಗಳು ಮೇಷಾದಿಯಾಗಿ ರಾಶ್ಯಾಧಿಪರು.

೫. * ಕ್ರೂರ ಸೌಮ್ಯಾ ನೃಸ್ತ್ರೀಯೌ ಚರಸ್ಥಿರದ್ವಿಸ್ವಭಾವಾಶ ಮೇಷಾದೇಃ ॥

ಮೇಷಾದಿಯಾಗಿ ರಾಶಿಗಳು : ೧. ಕ್ರೂರ ಸೌಮ್ಯಗಳು, ೨. ಪುರುಷ ಸ್ತ್ರೀಯರು ಮತ್ತು ೩. ಚರ–ಸ್ಥಿರ–ದ್ವಿಸ್ವಭಾವಗಳು.

೬. * ಸಿಂಹಾದಿ ಚತುಷ್ಕಯುಗ್ಮ ಕುಂಭಾಃ ಶೀರ್ಷೋದಯಾಃ ಮೀನ ಉಭಯೋದಯಃ ಶೇಷಾಃ ಪೃಷ್ಠೋದಯಾಃ ॥

ಸಿಂಹಾದಿ ೪ ರಾಶಿಗಳೂ, ಮಿಥುನ ಕುಂಭಗಳೂ ಶೀರ್ಷೋದಯಗಳು; ಮೀನವು ಉಭಯೋದಯ; ಉಳಿದ ರಾಶಿಗಳೆಲ್ಲಾ ಪೃಷ್ಠೋದಯಗಳು.

೭. * ಮಿಥುನ ಶೀರ್ಷೋದಯಾ ದಿನೇ ಶೇಷಾ ರಾತ್ರೌ ಬಲಿನಃ ॥

ಮಿಥುನವನ್ನು ಬಿಟ್ಟು ಶೀರ್ಷೋದಯ ರಾಶಿಗಳೆಲ್ಲಾ ದಿನಬಲ ರಾಶಿಗಳು; ಉಳಿದವುಗಳು ರಾತ್ರಿಬಲ ರಾಶಿಗಳು.

೮. * ದೇಹ ಧನ ಸೋತ್ಥ ಮಾತ್ರಾತ್ಮಜಾರಿಸ್ತ್ರೀಮೃತಿಧರ್ಮ ಕರ್ಮ ಲಾಭವ್ಯಯಾ ಲಗ್ನಾದ್ಭಾವಾಃ ॥

ಲಗ್ನಾದಿ ದ್ವಾದಶಭಾವಗಳಾವುವೆಂದರೆ : ೧. ದೇಹ, ೨. ಧನ, ೩. ಸಹೋದರ, ೪. ಮಾತೃ, ೫. ಆತ್ಮಜ, ೬. ಅರಿ, ೭. ಸ್ತ್ರೀ, ೮. ಮೃತಿ, ೯. ಧರ್ಮ, ೧೦. ಕರ್ಮ, ೧೧. ಲಾಭ ಮತ್ತು ೧೨. ವ್ಯಯ.

೯. * ಗೃಹಹೋರಾ ದ್ರೇಕ್ಕಾಣ ನವಾಂಶ ದ್ವಾದಶಾಂಶ ತ್ರಿಂಶಾಂಶಾಃ ಷಡ್ವರ್ಗಾಃ ॥

ಷಡ್ವರ್ಗಗಳಾವುವೆಂದರೆ : ೧. ಗೃಹ, ೨. ಹೋರಾ, ೩. ದ್ರೇಕ್ಕಾಣ, ೪. ನವಾಂಶ, ೫. ದ್ವಾದಶಾಂಶ ಮತ್ತು ೬. ತ್ರಿಂಶಾಂಶ.

೧೦. * ಸಮೇ ಚಂದ್ರಾರ್ಕಯೋರ್ವಿಷಮೇ ವ್ಯತ್ಯಯೇನ ಹೋರಾ ॥

ಸಮರಾಶಿಯಲ್ಲಿ ಚಂದ್ರ – ರವಿ ಹೋರೆಗಳು. ವಿಷಮರಾಶಿಯಲ್ಲಿ ರವಿ – ಚಂದ್ರ ಹೋರೆಗಳು.

೧೧. * ಸ್ವೇಷುನವರ್ಕ್ಷೇಶ್ಯಾದ್ರೇಕ್ಕಾಣಪಾಃ ॥

ರಾಶಿಯಿಂದ ೧, ೫, ೯ನೆಯ ಮನೆಗಳ ಅಧಿಪತಿಗಳು ದ್ರೇಕ್ಕಾಣಕ್ಕೆ ಅಧಿಪತಿಗಳು.

೧೨. * ಚರೇ ಭೇ ಸ್ವಸ್ಮಾತ್ ಸ್ಥಿರೇ ನವಮಭಾತ್ ದ್ವಿಸ್ವಭಾವೇ ಪಂಚಮ - ಭಾನ್ನವಾಂಶಃ ॥

ಚರ ರಾಶಿಯಲ್ಲಿ ತನ್ನಿಂದಲೂ, ಸ್ಥಿರರಾಶಿಯಲ್ಲಿ ಒಂಭತ್ತನೆಯ ಮನೆಯಿಂದಲೂ, ದ್ವಿಸ್ವಭಾವ ರಾಶಿಯಲ್ಲಿ ಐದನೆಯ ಮನೆಯಿಂದಲೂ ನವಾಂಶವಾಗುತ್ತದೆ.

೧೩. * ಸ್ವಭಾತ್ ದ್ವಾದಶಾಂಶಾಃ ॥

ದ್ವಾದಶಾಂಶಗಳನ್ನು ರಾಶಿಯಿಂದ ಎಣಿಸಬೇಕು.

೧೪. * ಸಮೇ ಶುಕ್ರಜ್ಞೇಜ್ಯಾರ್ಕಿ ಕುಜಾನಂ ಪಂಚಾದ್ಯಷ್ಟ ಶರೇಷವಸ್ತ್ರಿಂಶಾಂಶಾ ವಿಷಮೇಽನ್ಯಥಾ ॥

ಸಮರಾಶಿಯಲ್ಲಿ ಶುಕ್ರ-ಬುಧ-ಗುರು-ಶನಿ-ಕುಜ ಈ ಗ್ರಹ ಕ್ರಮದಲ್ಲಿ ೫-೭-೮-೫-೫ ತ್ರಿಂಶಾಂಶ ಭಾಗಗಳಾಗುತ್ತವೆ. ವಿಷಮರಾಶಿಯಲ್ಲಿ ಗ್ರಹಕ್ರಮವೂ, ಭಾಗಕ್ರಮವೂ ವ್ಯತ್ಯಾಸವಾಗುತ್ತವೆ.

೧೫. * ಷಡ್ವರ್ಗಾ ಏವ ಸಪ್ತಮಾಂಶ ಸಹಿತಾಃ ಸಪ್ತವರ್ಗಾಃ ॥

ಷಡ್ವರ್ಗಗಳೂ, ಸಪ್ತಮಾಂಶವೂ ಸೇರಿ ಸಪ್ತವರ್ಗಗಳಾಗುವವು.

೧೬. * ವಿಷಮೇ ಸ್ವಸ್ಮಾತ್ ಸಮೇ ಸಪ್ತಮಾತ್ ಸಪ್ತಮಾಂಶಃ ॥

ವಿಷಮ ರಾಶಿಯಲ್ಲಿ ರಾಶಿಯಿಂದಲೂ, ಸಮರಾಶಿಯಲ್ಲಿ ಅದರ ೭ನೆಯ ಮನೆಯಿಂದಲೂ ಸಪ್ತಮಾಂಶಗಳನ್ನು ಎಣಿಸಬೇಕು.

೧೭. * ಸಪ್ತವರ್ಗಾ ದಶಮಾಂಶ ಷೋಡಶಾಂಶ ಷಷ್ಟ್ಯಂಶಯುತಾಃ ದಶವರ್ಗಾಃ ॥

ಸಪ್ತವರ್ಗಗಳೂ, ದಶಮಾಂಶವೂ, ಷೋಡಶಾಂಶವೂ, ಷಷ್ಟ್ಯಂಶವೂ ಸೇರಿ ದಶವರ್ಗಗಳಾಗುವವು.

೧೮. * ಓಜೇ ಸ್ವಸ್ಮಾತ್ ಸಮೇ ನವಮಾದ್ದಶಮಾಂಶಃ ॥

ಓಜರಾಶಿಯಲ್ಲಿ ರಾಶಿಯಿಂದಲೂ, ಸಮರಾಶಿಯಲ್ಲಿ ಅದಕ್ಕೆ ನವಮರಾಶಿಯಿಂದಲೂ ದಶಮಾಂಶಗಳನ್ನು ಎಣಿಸಬೇಕು.

೧೯. * ಚರೇಽಜಾದ್ಯಾಃ ಸ್ಥಿರೇ ಸಿಂಹಾದ್ಯಾಃ ದ್ವಿಸ್ವಭಾವೇ ಚಾಪಾದ್ಯಾಃ ಷೋಡಶಾಂಶಾಃ ॥

ಚರರಾಶಿಯಲ್ಲಿ ಮೇಷಾದಿಯಾಗಿ, ಸ್ಥಿರರಾಶಿಯಲ್ಲಿ ಸಿಂಹಾದಿಯಾಗಿ, ದ್ವಿಸ್ವಭಾವರಾಶಿಯಲ್ಲಿ ಧನುರಾದಿಯಾಗಿ ಷೋಡಶಾಂಶಗಳನ್ನು ಎಣಿಸತಕ್ಕದ್ದು.

೨೦. * ಸ್ವಭಾತ್ ಷಷ್ಟ್ಯಂಶಃ ॥

ಷಷ್ಟ್ಯಂಶಗಳನ್ನು ರಾಶಿಯಿಂದಲೇ ಎಣಿಸತಕ್ಕದ್ದು.

೨೧. * ದ್ವ್ಯಾದಿಸ್ವೋಚ್ಚಾಧಿಮಿತ್ರವರ್ಗಃ ಪಾರಿಜಾತೋತ್ತಮ ಗೋಪುರ ಸಿಂಹಾಸನ ಪಾರವತ ದೇವಲೋಕೈರಾವತ ವೈಶೇಷಿಕ ಸಂಜ್ಞಃ ಕ್ರಮಾತ್ ॥

ಒಂದು ಗ್ರಹಕ್ಕೆ ೨ ಅಥವಾ ಹೆಚ್ಚು ಸ್ವ, ಉಚ್ಚ, ಅಧಿಮಿತ್ರಾದಿ ಶುಭವರ್ಗಗಳೊದಗಿದ್ದರೆ, ಕ್ರಮವಾಗಿ ೧. ಪಾರಿಜಾತ, ೨. ಉತ್ತಮ, ೩. ಗೋಪುರ, ೪. ಸಿಂಹಾಸನ, ೫. ಪಾರಾವತ, ೬. ದೇವಲೋಕ, ೭. ಐರಾವತ ಮತ್ತು ೮. ವೈಶೇಷಿಕಾಂಶಗಳಾಗುತ್ತವೆ.

೨೨. * ಷಷ್ಟ್ಯಂಶೇಶಾಸ್ತ್ವಯುಗ್ಮೇ ॥

| | | |
|---|---|---|
| ೧. ಘೋರ | ೮. ಕುಲಘ್ನ | ೧೫. ಕಾಲಾ |
| ೨. ರಾಕ್ಷಸ | ೯. ವಿಷ | ೧೬. ಅಹಿ |
| ೩. ದೇವ | ೧೦. ಅಗ್ನಿ | ೧೭. ಚಂದ್ರ–ಅಮೃತ |
| ೪. ಕುಬೇರ | ೧೧. ಮಾಯಾ | ೧೮. ಚಂದ್ರ |
| ೫. ರಕ್ಷೋಗಣ | ೧೨. ಪ್ರೇತಪುರೀಶ | ೧೯. ಮೃದು |
| ೬. ಕಿನ್ನರ | ೧೩. ವರುಣ | ೨೦. ಮೃದು–ಕೋಮಲ |
| ೭. ಭ್ರಷ್ಟ | ೧೪. ಇಂದ್ರ | ೨೧. ಪದ್ಮ |

| | | |
|---|---|---|
| ೨೨. ವಿಷ್ಣು | ೩೫. ಭಯ | ೪೮. ಶೀತಲ |
| ೨೩. ವಾಗೀಶ | ೩೬. ಕಂಟಕ | ೪೯. ದಂಷ್ಟ್ರಾಕರಾಲ |
| ೨೪. ದಿಗಂಬರ | ೩೭. ಸುಧಾ | ೫೦. ಇಂದುಮುಖ |
| ೨೫. ದೇವಾ | ೩೮. ಅಮೃತ | ೫೧. ಕಾಲಾಗ್ನಿ |
| ೨೬. ಆರ್ದ್ರ | ೩೯. ಪೂರ್ಣೇಂದು | ೫೨. ದಂಡಾಯುಧ |
| ೨೭. ನಾಶ | ೪೦. ವಿಷ | ೫೩. ನಿರ್ಮಲ |
| ೨೮. ಕ್ಷಿತೀಶ | ೪೧. ಕಲಿ | ೫೪. ಶುಭ |
| ೨೯. ಕಮಲಾಕರ | ೪೨. ನಾಶ | ೫೫. ಅಶುಭ |
| ೩೦. ಮಂದಾತ್ಮಜ | ೪೩. ವಂಶಕ್ಷಯ | ೫೬. ಶೀತಲ |
| ೩೧. ಮೃತ್ಯು | ೪೪. ಉತ್ಪಾತ | ೫೭. ಸುಧಾ |
| ೩೨. ಕಾಲ | ೪೫. ಕಾಲರೂಪ | ೫೮. ಪಯೋಧಿ |
| ೩೩. ದಾವಾಗ್ನಿ | ೪೬. ಸೌಮ್ಯ | ೫೯. ಭ್ರಮಣ |
| ೩೪. ಘೋರ | ೪೭. ಮೃದು | ೬೦. ಇಂದುರೇಖಾಃ |

**ಯುಗ್ಮೇ ವ್ಯತ್ಯಯಃ**

ಓಜ ರಾಶಿಯಲ್ಲಿ ಷಷ್ಟ್ಯಂಶಗಳನ್ನು ೧ ರಿಂದ ೬೦ರವರೆಗೂ, ಯುಗ್ಮ ರಾಶಿಯಲ್ಲಿ ೬೦ ರಿಂದ ೧ರವರೆಗೂ ಎಣಿಸತಕ್ಕದ್ದು.

೨೩. * ಲಗ್ನಾಂಬ್ವಪ್ತದಶಮಾನಿ ಕೇಂದ್ರಾಣಿ ॥

೧, ४, ೭, ೧೦ ನೆಯ ಮನೆಗಳಿಗೆ ಕೇಂದ್ರಗಳೆಂದು ಹೆಸರು.

೨೪. * ಸ್ವಾಯಾಷ್ಟಮಾತ್ಮಜಾಃ ಪಣಫರಾಃ ॥

೨, ೧೧, ೮, ೫ ಪಣಫರಗಳು.

೨೫. * ತ್ರ್ಯರಿಧರ್ಮಾಂತ್ಯಾ ಆಪೋಕ್ಲಿಮಾಃ ॥

೩, ೬, ೯, ೧೧ ಆಪೋಕ್ಲಿಮಗಳು.

೨೬. * ತ್ರ್ಯಾಯಖಾರಯ ಉಪಚಯಾಃ ॥

೩, ೧೧, ೧೦, ೬ ಉಪಚಯಗಳು.

೨೭. * ಧರ್ಮಾತ್ಮಜೌ ತ್ರಿಕೋಣೌ ॥

೫, ೯ ತ್ರಿಕೋಣಗಳು.

೨೮. * ತುರ್ಯಾಷ್ಟಮೌ ಚತುರಸ್ರೌ ॥

೪, ೮ ಚತುರಸ್ರಗಳು.

೨೯. * ಸ್ವಾಸ್ತೌ ಮಾರಕೌ ॥

೨, ೭ ಮಾರಕ ಸ್ಥಾನಗಳು.

೩೦. * ಸ್ವಾಂತ್ಯೌನೇತ್ರಸಂಜ್ಞಾ ॥

೨, ೧೨ ನೇತ್ರಗಳು.

೩೧. * ಷಷ್ಠಾಷ್ಟಮಾಂತ್ಯಾಸ್ತ್ರಿಕಾ ದುಷ್ಟಾಶ್ಚ ॥

೬, ೮, ೧೨ ತ್ರಿಕಗಳು ; ಅವೇ ದುಷ್ಟ ಸ್ಥಾನಗಳು.

೩೨. * ಕರ್ಕಾಲಿ ಝಷಾಂತ್ಯಭಾಗಾ ಋಕ್ಷಸಂಧಯಃ ॥

ಕಟಕ, ವೃಶ್ಚಿಕ, ಮೀನ ರಾಶಿಗಳ ಅಂತ್ಯಭಾಗಗಳಿಗೆ ಋಕ್ಷಸಂಧಿಗಳೆಂದು ಹೆಸರು.

೩೩. * ಸಿಂಹಾದಿ ಚತುಷ್ಕಂ ದೀರ್ಘಂ ಕುಂಭಾದಿ ಚತುಷ್ಕಂ ಹ್ರಸ್ವಂ ಶೇಷಾಃ ಸಮಾಃ ॥

ಸಿಂಹಾದಿ ೪ ರಾಶಿಗಳು ದೀರ್ಘ ; ಕುಂಭಾದಿ ೪ ಹ್ರಸ್ವ ; ಉಳಿದ ರಾಶಿಗಳು ಸಮ.

೩೪. * ಅರ್ಕೋ ಜೀವಃ ಕುಜಃ ಚಂದ್ರಜ್ಞೌ ಗುರುಃ ಮಂದಾರೌ ಶುಕ್ರಃ ಶನಿಃ ಸೂರ್ಯೇಜ್ಯಾ ಜ್ಞಾರ್ಕೇಜ್ಯಮಂದಾಃ ಜೀವಃ ಶನಿರಿತಿ ಕ್ರಮಾತ್ತ-ನ್ವಾದಿಕಾರಕಃ ॥

ತನ್ವಾದಿ ದ್ವಾದಶಭಾವಕಾರಕರು : ೧. ರವಿ, ೨. ಗುರು, ೩. ಕುಜ, ೪. ಚಂದ್ರ – ಬುಧರು, ೫. ಗುರು, ೬. ಶನಿ – ಕುಜರು, ೭. ಶುಕ್ರ, ೮. ಶನಿ, ೯. ರವಿ – ಗುರುಗಳು, ೧೦. ಬುಧ, ರವಿ, ಗುರು, ಶನಿಗಳು, ೧೧. ಗುರು, ೧೨. ಶನಿ.

೩೫. * ಕರ್ಕಘಟ್ಯೈಣ ಝಷಾಳಿ ತುಲಾಃ ಸಜಲಾಃ ಶೇಷಾಃ ಶುಷ್ಕಾಃ ॥

ಕಟಕ, ಕುಂಭ, ಮಕರ, ಮೀನ, ವೃಶ್ಚಿಕ, ತುಲಾರಾಶಿಗಳು ಜಲ ರಾಶಿಗಳು ; ಉಳಿದವುಗಳು ನಿರ್ಜಲರಾಶಿಗಳು.

೩೬. * ಕ್ಷೀಣೇಂದ್ವರ್ಕಯಮಾರ ರಾಹು ಶಿಖಿನಃ ಪಾಪಾಸ್ತನ್ಮಾತ್ರಯುತೋ ಬುಧಸ್ತ ॥

ಕ್ಷೀಣಚಂದ್ರ, ರವಿ, ಶನಿ, ಕುಜ, ರಾಹು ಮತ್ತು ಕೇತು ಪಾಪಗ್ರಹಗಳು, ಪಾಪಗ್ರಹಗಳ ಜೊತೆಯಲ್ಲಿರುವ ಬುಧನೂ ಪಾಪಿಯೇ.

೩೭. * ಮಂದಜ್ಞೌ ಕ್ಲೀಬೌ ಚಂದ್ರಾಚ್ಛೌ ಸ್ತ್ರೀಯೌ ಶೇಷಾ ನರಾಃ ॥

ಶನಿ ಬುಧರು ನಪುಂಸಕರು ; ಚಂದ್ರ ಶುಕ್ರರು ಸ್ತ್ರೀಯರು ; ಉಳಿದವರು ಪುರುಷರು.

೩೮. * ಚಂದ್ರಾರ್ಕೇಜ್ಯಾಃ ಸಾತ್ವಿಕಾ ಜಾಚ್ಛೌ ರಾಜಸೌ ಶೇಶಾಸ್ತಾಮಸಾಃ ॥

ಚಂದ್ರ ರವಿ ಗುರುಗಳು ಸಾತ್ವಿಕರು, ಬುಧ ಶುಕ್ರರು ರಾಜಸರು, ಉಳಿದವರು ತಾಮಸಿಗಳು.

೩೯. * ಮೇಷ ಗೋ ಮೃಗ ಕನ್ಯಾ ಕರ್ಕಾಂತ್ಯ ತುಲಾಃ ಸೂರ್ಯಾದ್ಯುಚ್ಚಭಾನಿ ತತ್ಸಪ್ತಮಾನಿ ನೀಚಭಾನಿದಶಮ ತೃತೀಯಾಷ್ಟಾವಿಂಶ ಪಂಚದಶ ಪಂಚಮ ಸಪ್ತವಿಂಶ ವಿಂಶಾಂಶಾ ಅರ್ಕಾ ದೀನಾಂ ಪರಮೋಚ್ಚ ನೀಚಭಾಗಾಃ ॥

ಮೇಷ, ವೃಷಭ, ಮಕರ, ಕನ್ಯಾ, ಕಟಕ, ಮೀನ ಮತ್ತು ತುಲಾ ರಾಶಿಗಳು ರವ್ಯಾದಿ ಗ್ರಹಗಳಿಗೆ ಉಚ್ಚರಾಶಿಗಳು. ತತ್ತತ್ಸಪ್ತಮ ರಾಶಿಗಳು ನೀಚರಾಶಿಗಳು. ೧೦-೩-೨೮-೧೫-೫-೨೭-೨೦ನೆಯ ಭಾಗಗಳು ಆಯಾ ರಾಶಿಗಳಲ್ಲಿ ರವ್ಯಾದಿಯಾಗಿ ಪರಮೋಚ್ಚ - ನೀಚ ಭಾಗಗಳು.

೪೦. * ಸಿಂಹ ಗೋಜಾಂಗನಾ ಚಾಪ ತುಲಾ ಘಟಾಃ ಸೂರ್ಯಾದೀನಾಂ ಮೂಲತ್ರಿಕೋಣಭಾನಿ ॥

ಸಿಂಹ, ವೃಷಭ, ಮೇಷ, ಕನ್ಯಾ, ಧನಸ್ಸು, ತುಲಾ ಮತ್ತು ಕುಂಭ ರಾಶಿಗಳು ರವ್ಯಾದಿ ಗ್ರಹಗಳಿಗೆ ಮೂಲತ್ರಿಕೋಣ ರಾಶಿಗಳು.

೪೧. * ಸ್ವನವಾಂಶಕಾ ರಾಶಯೋ ವರ್ಗೋತ್ತಮಾಃ ॥

ಪ್ರತಿ ರಾಶಿಯಲ್ಲಿಯೂ ಸ್ವನವಾಂಶಗಳು ವರ್ಗೋತ್ತಮಗಳು.

೪೨. * ಪಿಂಗಳನೇತ್ರೋ ರಕ್ತಶ್ಯಾಮವರ್ಣಃ ಪಿತ್ತಪ್ರಕೃತಿಃ ಸಮಗಾತ್ರಃ ಪ್ರತಾಪೀ ಅಲ್ಪರೋಮವಾಗರ್ಕಃ ॥

ರವಿ : ಕೆಂಪು ಕಂದು ಬಣ್ಣದ ಕಣ್ಣುಗಳು, ಕಪ್ಪು ಕೆಂಪು ದೇಹ, ಪಿತ್ತ ಪ್ರಕೃತಿ, ಸಮಗಾತ್ರ, ಪ್ರತಾಪಶಾಲಿ, ಸ್ವಲ್ಪವಾದ ಕೂದಲು ಮತ್ತು ಮಾತು.

೪೩. * ಶುಕ್ಲಃ ಕೃಶೋ ವರ್ತುಲಾಂಗೋ ಮೇಧಾವೀ ಮೃದುವಾಕ್ ಶುಭದೃಗ್ ವಿವೇಕೀ ವಾತಕಫಾತ್ಮಾ ಚಂದ್ರಃ ॥

ಚಂದ್ರ : ಬಿಳುಪು, ಕೃಶವಾದ ಗುಂಡಾಗಿರುವ ದೇಹ, ಪ್ರಜ್ಞಾವಂತ, ಮೃದು ಮಾತು, ಒಳ್ಳೆಯ ಕಣ್ಣುಗಳು, ವಿವೇಕಿ, ವಾತ ಕಫಗಳಿಂದ ಕೂಡಿದ ಶರೀರ.

೪೪. * ದುಷ್ಟದೃಕ್ ತರುಣಃ ಕೃಶಮಧ್ಯೋ ರಕ್ತಸಿತಾಂಗಃ ಪೈತ್ತಿಕಶ್ಚಂಚಲಧೀರುದಾರಪ್ರತಾಪ್ಯಾರಃ ॥

ಕುಜ : ಕ್ರೂರದೃಷ್ಟಿ, ಯೌವನಮೂರ್ತಿ, ಸಣ್ಣಗಿರುವ ಸೊಂಟ, ಕೆಂಪು, ಬಿಳುಪು ಬಣ್ಣ, ಪಿತ್ತಸ್ವಭಾವ, ಚಂಚಲಪ್ರಕೃತಿ, ಉದಾರಬುದ್ಧಿ, ಪ್ರತಾಪಶಾಲಿ.

೪೫. * ಗದ್ಗದವಾಗ್ಘಾಸ್ಯಶೀಲಃ ಸುಧೀರ್ದೂರ್ವಾ ಶ್ಯಾಮಾಂಗ ಸ್ತ್ರೀ ಧಾತುಃ ಪುಂಶ್ಚಲೋಜ್ಞಃ ॥

ಬುಧ : ಗದ್ಗದ ಧ್ವನಿ, ಹಾಸ್ಯಭರಿತ, ಸುಬುದ್ಧಿ, ದೂರ್ವಾ– ಹುಲ್ಲಿನಂತೆ ಕಪ್ಪು ಹಸುರು ಬಣ್ಣ, ವಾತಪಿತ್ತಕಫಾತ್ಮಕ ಪ್ರಕೃತಿ, ಅಶುದ್ಧ.

೪೬. * ಸ್ಥೂಲೋ ಗೌರಾಂಗಃ ಕಫಾತ್ಮಾ ಪಿಂಗಾಕ್ಷಮೂರ್ಧನ್ಯ ಕಚಾಭಿಯುಕ್ತೋ ವಿದ್ವಾನ್ ಗುರುಃ ॥

ಗುರು : ದಪ್ಪವಾದ ದೇಹ, ಹಳದಿಯ ಬಣ್ಣ, ಶ್ಲೇಷ್ಮ ಪ್ರಕೃತಿ, ಕಂದು ಬಣ್ಣವುಳ್ಳ ಕಣ್ಣುಗಳು ಮತ್ತು ಕೂದಲು, ವಿದ್ವಾಂಸ.

೪೭. * ಸುಖೀ ಬಲೀ ದರ್ಶನೀಯವಪುಃ ಸುಲೋಚನಃ ಕೃಷ್ಣ ಕುಟಿಲ-
ಕೇಶಃ ಕಾಮೀ ವಾತಕಫಾತ್ಮ ಶ್ಯಾಮಃ ಶುಕ್ರಃ ||

ಶುಕ್ರ : ಸುಖಿಪುರುಷ, ಬಲಿಷ್ಠ, ಸುಂದರ ಶರೀರ, ಮೃದು ದೃಷ್ಟಿ, ಕಪ್ಪು ಗುಂಗುರು ಕೂದಲು, ಕಾಮಿ, ವಾರಶ್ಲೇಷ್ಮ ಪ್ರಕೃತಿ, ಬಿಳುಪು, ಕಪ್ಪು.

೪೮. * ಕ್ರಿಯಾಸ್ವಪಟುಃ ಕಾತರಾಕ್ಷಃ ಕೃಷ್ಣಃ ಕೃಶದೀರ್ಘಾಂಗೋ
ಬೃಹದ್ದಂತೋ ರೂಕ್ಷತನೂರು ಹೋ ವಾತಾತ್ಮ ಕಠಿನವಾಗ್
ನಿಂದ್ಯೋ ಮಂದಃ ||

ಶನಿ : ಕಾರ್ಯಗಳಲ್ಲಿ ನಿಧಾನ, ಚಂಚಲವಾದ ಕಣ್ಣುಗಳು, ಕಪ್ಪು ಕೃಶವಾದ ದೀರ್ಘದೇಹ, ದೊಡ್ಡ ದೇಹ, ಒರಟಾದ ಕೂದಲು, ವಾತ ಪ್ರಕೃತಿ, ಕಠಿಣ ಮಾತು, ಎಲ್ಲರಿಂದಲೂ ನಿಂದ್ಯನು.

೪೯. * ಅಸ್ಥಿ ರಕ್ತ ಮಜ್ಜಾತ್ವಗ್ ವಸಾಶುಕ್ಲಾಸ್ನಾಯೂನಿ ಸೂರ್ಯಾದೀನಾಂ
ಧಾತವಃ ||

೧. ಎಲುಬು, ೨. ರಕ್ತ, ೩. ಮಜ್ಜೆ, ೪. ಚರ್ಮ, ೫. ಕೊಬ್ಬು, ೬. ವೀರ್ಯ, ೭. ಮಾಂಸಖಂಡ, ಇವು ರವ್ಯಾದಿ ಗ್ರಹಗಳಿಗೆ ಧಾತುಗಳು.

೫೦. * ಸೂರ್ಯಸ್ಯ ಮಂದಾಚ್ಛೌ ರಿಪೂಜ್ಞಃ ಸಮಃ ಶೇಷಾಃ ಸುಹೃದಃ ||
ರವಿಗೆ ಶತ್ರುಗಳು ಶನಿ-ಶುಕ್ರರು, ಬುಧ ಸಮ, ಉಳಿದವರು ಸ್ನೇಹಿತರು.

೫೧. * ಚಂದ್ರಸ್ಯಜ್ಞಾರ್ಕೌ ಸುಹೃದೌ ಶೇಷಃ ಸಮಾಃ ||
ಚಂದ್ರನಿಗೆ ರವಿ - ಬುಧರು ಸ್ನೇಹಿತರು, ಉಳಿದವರು ಸಮರು.

೫೨. * ಭೌಮಸ್ಯ ಶುಕ್ರಾರ್ಕೀ ಸಮೌ ಜ್ಞೋsರಿಃ ಶೇಷಾಃ ಸುಹೃದಃ ||
ಅಂಗಾರಕನಿಗೆ ಶುಕ್ರ - ರವಿಗಳು ಸಮರು, ಬುಧ ಶತ್ರು, ಉಳಿದವರು ಸ್ನೇಹಿತರು.

೫೩. * ಜ್ಞಸ್ಯೇಂದುಃ ಶತ್ರುಃ ಶುಕ್ರಾರ್ಕೌ ಮಿತ್ರೇ ಶೇಷಾಃ ಸಮಾಃ ||
ಬುಧನಿಗೆ ಚಂದ್ರ ಶತ್ರು, ಶುಕ್ರ-ರವಿಗಳು ಮಿತ್ರರು, ಉಳಿದವರು ಸಮರು.

೫೪. * ಜೀವಸ್ಯಜ್ಞಾಚ್ಛಾವರೀ ಸಮೋऽರ್ಕಜಃ ಶೇಷಾಃ ಮಿತ್ರಾಣಿ ॥
ಗುರುವಿಗೆ ಬುಧ – ಶುಕ್ರರು ಶತ್ರುಗಳು, ಶನಿ ಸಮ, ಉಳಿದವರು ಮಿತ್ರರು.

೫೫. * ಶುಕ್ರಸ್ಯಜ್ಞಾರ್ಕಜೌ ಮಿತ್ರೇ ಕುಜೇಜ್ಯಾ ಸಮೌ ಶೇಷಾವರೀ ॥
ಶುಕ್ರನಿಗೆ ಬುಧ – ಶನಿಗಳು ಮಿತ್ರರು, ಕುಜ – ಗುರುಗಳು ಸಮರು, ಉಳಿದ ಇಬ್ಬರು ಶತ್ರುಗಳು.

೫೬. * ಮಂದಸ್ಯಜ್ಞಾಚ್ಛೌ ಸುಹೃದೌ ಜೀವಃ ಸಮಃ ಶೇಷಾಃ ಶತ್ರವಃ ॥
ಶನಿಗೆ ಬುಧ–ಶುಕ್ರರು ಮಿತ್ರರು, ಗುರು ಸಮ, ಉಳಿದವರು ಶತ್ರುಗಳು.

೫೭. * ಅನ್ಯೋನ್ಯಸ್ಯ ಪಾರ್ಶ್ವತ್ರಯಗಾಸ್ತತ್ಕಾಲೇ ಮಿತ್ರಾಣಿ ಶೇಷಾಃ ಶತ್ರವಃ ॥
ಗ್ರಹಕ್ಕೆ ಎರಡು ಪಕ್ಕ ರಾಶಿಗಳಲ್ಲಿರುವ ಗ್ರಹಗಳು ತಾತ್ಕಾಲಿಕ ಮಿತ್ರರು, ಉಳಿದವರು ಶತ್ರುಗಳು.

೫೮. * ಉಭಯಥಾಮಿತ್ರಾಣ್ಯಧಿಮಿತ್ರಾಣಿ ಶತ್ರವಸ್ತ್ವಧಿಶತ್ರವೋ ಮಿತ್ರ ಶತ್ರವಃ ಸಮಾ ಮಿತ್ರಸಮಾ ಮಿತ್ರಾಣಿ ಶತ್ರುಸಮಾಃ ಶತ್ರವಃ ॥

| | | | | | |
|---|---|---|---|---|---|
| ೧. | ನೈಸರ್ಗಿಕ ಮಿತ್ರ | + | ತಾತ್ಕಾಲಿಕ ಮಿತ್ರ | = | ಅಧಿಮಿತ್ರ |
| ೨. | ನೈಸರ್ಗಿಕ ಶತ್ರು | + | ತಾತ್ಕಾಲಿಕ ಶತ್ರು | = | ಅಧಿಶತ್ರು |
| ೩. | ನೈಸರ್ಗಿಕ ಸಮ | + | ತಾತ್ಕಾಲಿಕ ಮಿತ್ರ | = | ಮಿತ್ರ |
| ೪. | ನೈಸರ್ಗಿಕ ಸಮ | + | ತಾತ್ಕಾಲಿಕ ಶತ್ರು | = | ಶತ್ರು |
| ೫. | ಶತ್ರು | + | ಮಿತ್ರ (ಉಭಯತಃ) | = | ಸಮ |

೫೯. * ತೃತೀಯ ದಶಮೌ ನವಮ ಪಂಚಮೌ ಚತುರ್ಥಾಷ್ಟಮೌ ಸಪ್ತಮಂಪಾದದ್ವೃದ್ಧಿತೋ ಗ್ರಹಾಃ ಪಶ್ಯಂತಿ ॥
ಎಲ್ಲಾ ಗ್ರಹಗಳೂ ೩, ೧೦ನೆಯ ಮನೆಗಳನ್ನು ಕಾಲು ದೃಷ್ಟಿ ಯಿಂದಲೂ; ೫, ೯ನೆಯ ಮನೆಗಳನ್ನು ಅರ್ಧದೃಷ್ಟಿಯಿಂದಲೂ; ೪, ೮ನೆಯ ಮನೆಗಳನ್ನು ಮುಕ್ಕಾಲು ದೃಷ್ಟಿಯಿಂದಲೂ; ೭ನೆಯ ಮನೆಯನ್ನು ಪೂರ್ಣ ದೃಷ್ಟಿಯಿಂದಲೂ ನೋಡುತ್ತಾರೆ.

೬೦. * ತೃತೀಯ ದಶಮೌ ಶನಿಃ ತ್ರಿಕೋಣಂ ಗುರುಶ್ಚತ್ರರಸ್ರಂ ಭೌಮಶ್ಚ ವಿಶೇಷತಃ ಪೂರ್ಣಂ ಪಶ್ಯಂತಿ ||

ಶನಿಯು ೩, ೧೦ನೆಯ ಮನೆಯ ದೃಷ್ಟಿ; ಗುರುವಿನ ೫, ೯ನೆಯ ಮನೆದೃಷ್ಟಿ ; ಮತ್ತು ಕುಜನ ೪, ೮ನೆಯ ಮನೆ ದೃಷ್ಟಿ – ಇವು ವಿಶೇಷವಾದ ಪೂರ್ಣ ದೃಷ್ಟಿಗಳು.

೬೧. * ದಿನೇ ವಾರಾರಂಭಾದಸ್ತ ಕಾಲೋ ನಿಶ್ಯಸ್ತತೋ ವಾರ ಪ್ರವೇಶ ಕಾಲಾಂತಃ ಸ್ವವಾರಖಂಡೇನ ಹತೋಽಷ್ಟ ಭಕ್ತೋ ಲಬ್ಧಂ ಗುಲಿಕೇಷ್ಟ ಕಾಲಃ ||

ಸೂರ್ಯೋದಯಾದಿ ಅಸ್ತಮಯದವರೆಗೂ ಇರುವ ಅಹಃ ಪ್ರಮಾಣ ವನ್ನಾಗಲೀ ; ಅಸ್ತಮಯಾದಿ ಮುಂದಿನ ವಾರ ಪ್ರವೇಶ ಕಾಲದವರೆಗೂ ಇರುವ ರಾತ್ರಿ ಪ್ರಮಾಣವನ್ನಾಗಲೀ ; ವಾರಖಂಡ ಪ್ರಮಾಣದಿಂದ ಗುಣಿಸಿ, ೮ ರಿಂದ ಭಾಗಿಸಿದರೆ ಅಹಸ್ಸಿನಲ್ಲಿಯಾಗಲಿ, ರಾತ್ರಿಯಲ್ಲಾಗಲಿ ಗುಲಿಕರ ಸ್ಥಾನವು ತಿಳಿಯುವುದು.

೬೨. * ತತ್ಕಾಲ ಲಗ್ನತುಲ್ಯೋ ಗುಳಿಕಃ ||

ಗುಳಿಕನ ಸ್ಥಾನವು ತಾತ್ಕಾಲಿಕ ಲಗ್ನವನ್ನನುಸರಿಸುವುದು.

೬೩. * ದಿನೇಽರ್ಕಾದ್ರಾತ್ರೌ ಜ್ಞಾನ್ನಗಾಂಗಪಂಚಾಬ್ಧಿ ತ್ರಿನೇತ್ರೇಂದು ಮಿತಾ ಗುಳಿಕಖಂಡಾಃ ||

ಹಗಲು ಜನನಕ್ಕೆ ಹಗಲನ್ನು ೮ ಸಮಭಾಗ ಮಾಡಬೇಕು. ಭಾನುವಾರಾದಿಯಾಗಿ ೭-೬-೫-೪-೩-೨-೧ನೆಯ ಖಂಡಗಳು ಗುಳಿಕನ ಖಂಡಗಳಾಗುವವು.

ರಾತ್ರಿ ಜನನಕ್ಕೆ: ರಾತ್ರಿಯನ್ನು ೮ ಭಾಗ ಮಾಡಬೇಕು. ಬುಧ ವಾರಾದಿಯಾಗಿ ೭-೬-೫-೪-೩-೨-೧ನೆಯ ಖಂಡಗಳು ಗುಳಿಕನ ಖಂಡ ಗಳಾಗುವವು.

೬೪. * ಅನ್ಯೋನ್ಯದೃಷ್ಟೌ ಏಕತರದೃಷ್ಟೌ ಅನ್ಯೋನ್ಯಸ್ಥಾನ ಸ್ಥಿತಾ- ವೇಕತ್ರಸ್ಥಿತೌವಾ ಸಂಬಂಧೋಽವಗಂತವ್ಯಃ ||

ಎರಡು ಗ್ರಹಗಳು –

೧. ಒಬ್ಬರನ್ನೊಬ್ಬರು ನೋಡಿದರೂ,

೨. ಒಬ್ಬನನ್ನು ಮಾತ್ರ ಮತ್ತೊಬ್ಬನು ನೋಡಿದರೂ,

೩. ಒಬ್ಬರ ಮನೆಯಲ್ಲೊಬ್ಬರಿದ್ದರೂ,

೪. ಇಬ್ಬರೂ ಒಂದೇ ಕಡೆಯಿದ್ದರೂ,

ಆ ಗ್ರಹಗಳಿಗೆ ಸಂಬಂಧವಿದೆಯೆಂದು ಹೇಳಬೇಕು.

೬೫. * ಮುಂದಾರ್ಕಾರಾಃ ಶುಷ್ಕಾಶ್ಚಂದ್ರಾಚ್ಛೌ ಸಜಲೌ ಜಲರ್ಕ್ಷೆಗೌಜ್ಞೇಜ್ಯೌ ಚ ||

ಶನಿ–ರವಿ–ಕುಜರು ಶುಷ್ಕ ಗ್ರಹಗಳು, ಚಂದ್ರ–ಶುಕ್ರರು ಜಲ ಗ್ರಹಗಳು, ಜಲರಾಶಿಯಲ್ಲಿರುವ ಗುರು–ಬುಧರು ಜಲಗ್ರಹಗಳು.

೬೬. * ಸರ್ವಗ್ರಹೇಭ್ಯೋಽಧಿಕಾಂಶಾದಿನಾಽತ ಕಾರಕಸ್ತತಃ ||
ಕ್ರಮೇಣ ನ್ಯೂನಾಂಶಾ ಅಮಾತ್ಯಭ್ರಾತೃ ಮಾತೃಪಿತೃಪುತ್ರ ಜ್ಞಾತಿ ದಾರಕಾರಕಾಃ ||

ತಾನಿರುವ ರಾಶಿಯಲ್ಲಿ ಅತ್ಯಂತ ಭಾಗಾದಿಕಗ್ರಹಕ್ಕೆ ಆತ್ಮಕಾರಕನೆಂದು ಹೆಸರು. ಅಲ್ಲಿಂದ ಮುಂದೆ ನ್ಯೂನಭಾಗ ಕ್ರಮದಲ್ಲಿ ಅಮಾತ್ಯಕಾರಕ, ಭ್ರಾತೃಕಾರಕ, ಮಾತಾಪಿತೃಕಾರಕ, ಪುತ್ರಕಾರಕ, ಜ್ಞಾತಿಕಾರಕ ಮತ್ತು ದಾರಕಾರಕರಾಗುತ್ತಾರೆ.

೬೭. * ಅಂಶಶಬ್ದೇನಾತ್ಮಕಾರಕ ನವಾಂಶಃ ||

ಈ ಗ್ರಂಥದಲ್ಲಿ "ಅಂಶ"ವೆಂದರೆ ಆತ್ಮಕಾರಕ ನವಾಂಶವೆಂದರ್ಥ.

೬೮. * ಓಜರ್ಕ್ಷೇ ಕ್ರಮಾದ್ಬಾಲ ಕುಮಾರ ಯುವವೃದ್ಧಮೃತಾಖ್ಯಾ ಅಮಾಃ ಸಮರ್ಕ್ಷೇ ವ್ಯತ್ಯಯಃ ||

ಓಜರಾಶಿಯಲ್ಲಿ ಗ್ರಹವು ಸಾಧಿಸಿರುವ ಭಾಗಗಳನ್ನನುಸರಿಸಿ ಆ ಗ್ರಹಕ್ಕೆ ಕ್ರಮವಾಗಿ ಬಾಲ್ಯ–ಕೌಮಾರ್ಯ–ಯೌವ್ವನ–ವಾರ್ಧಕ್ಯ–ಮೃತ ಎಂಬ ಅವಸ್ಥೆಗಳುಂಟು. ಸಮರಾಶಿಯಲ್ಲಿ ಇದಕ್ಕೆ ವ್ಯತ್ಯಸ್ತ.

೧೯. * ದ್ವಾದಶಾಂಶಾದಂಶಷಟ್ಕೇಽವಸ್ಥಿತಃ ಪೂರ್ಣಫಲದಃ ॥
ಯಾವ ರಾಶಿಯಲ್ಲಿಯೇ ಆಗಲಿ ಗ್ರಹವು ೧೩ನೆಯ ಭಾಗದಿಂದ ೧೮ ನೆಯ ಭಾಗದವರೆಗೂ ಪೂರ್ಣಫಲವನ್ನು ಕೊಡುತ್ತದೆ.

೨೦. * ಬಲಂಪದ್ಧತ್ಯುಕ್ತಂ ॥
ಬಲಸಾಧನೆಯು "ಪದ್ಧತಿಯಲ್ಲಿ" ಹೇಳಿದೆ.

೨೧. * ವಕ್ರಗ ಉಚ್ಚಗೋ ವಾ ಮಹಾಬಲೀ ॥
ವಕ್ರ ಗ್ರಹಕ್ಕೂ, ಉಚ್ಚ ಗ್ರಹಕ್ಕೂ ಹೆಚ್ಚು ಬಲ.

೨೨. * ಸ್ವರ್ಕ್ಷತುಂಗಮೂಲತ್ರಿಕೋಣಗಾ ನಾನಿಷ್ಟಫಲದಾಃ ॥
ಸ್ವಕ್ಷೇತ್ರ, ಉಚ್ಚಕ್ಷೇತ್ರ ಮತ್ತು ಮೂಲತ್ರಿಕೋಣಗಳಲ್ಲಿರುವ ಗ್ರಹಗಳು ಅನಿಷ್ಟ ಫಲಗಳನ್ನು ಕೊಡುವುದಿಲ್ಲ.

೨೩. * ಗುರುಪೂರ್ಣದೃಷ್ಟೋ ಗ್ರಹೋ ನಾನಿಷ್ಟ ಫಲದಃ ॥
ಗುರುವಿನ ಪೂರ್ಣದೃಷ್ಟಿಯುಳ್ಳ ಗ್ರಹವು ಅನಿಷ್ಟಫಲವನ್ನು ಕೊಡುವುದಿಲ್ಲ.

೨೪. * ಗ್ರಹರ್ಕ್ಷಸಂಖ್ಯಾ ಗ್ರಹಸಂಖ್ಯಾಹತಾ ಪುನಃ ಗ್ರಹಾಂಶ ಸಂಖ್ಯಾಹತಾ ಇಷ್ಟಜನ್ಮನಕ್ಷತ್ರ ಲಗ್ನ ಸಂಖ್ಯಾಭಿರ್ಯು ತಾರ್ಕನಷ್ಟಾ ಶೇಷಾವಸ್ಥಾ ॥

೧. ಗ್ರಹವಿರುವ ಅಶ್ವಿನ್ಯಾದಿ ನಕ್ಷತ್ರ ಸಂಖ್ಯೆ
೨. ರವ್ಯಾದಿ ಗ್ರಹ ಸಂಖ್ಯೆ
೩. ಗ್ರಹವಿರುವ ಭಾಗ ಸಂಖ್ಯೆ
ಈ ಮೂರನ್ನೂ ಗುಣಿಸಿ ಬಂದ ಮೊತ್ತಕ್ಕೆ
೧. ಜಾತಕನ ಜನ್ಮನಕ್ಷತ್ರ ಸಂಖ್ಯೆ
೨. ಮೇಷಾದಿ ಜನ್ಮಲಗ್ನ ಸಂಖ್ಯೆ
ಈ ಎರಡನ್ನೂ ಕೂಡಿ, ಬಂದ ಮೊತ್ತವನ್ನು ೧೨ ರಿಂದ ಭಾಗಿಸಿ ಬಂದ ಶೇಷವು ಶಯನಾದಿ ಅವಸ್ಥಾಸಂಖ್ಯೆಯಾಗುವುದು.

೭೫. * ಶಯನೋಪವೇಶನ ನೇತ್ರ ಪಾಣಿ ಪ್ರಕಾಶ ಗಮನಾಗಮನ ಸಭಾಗಮ
ಭೋಜನ ನೃತ್ಯಲಿಪ್ಸಾ ಕೌತುಕ ನಿದ್ರಾ ಅವಸ್ಥಾ: ||

ಅವಸ್ಥೆಗಳಾವುವೆಂದರೆ :-

| | | |
|---|---|---|
| ೧. ಶಯನ | ೫. ಗಮನ | ೯. ಭೋಜನ |
| ೨. ಉಪವೇಶನ | ೬. ಆಗಮನ | ೧೦. ನೃತ್ಯಲಿಪ್ಸಾ |
| ೩. ನೇತ್ರಪಾಣಿ | ೭. ಸಭಾ | ೧೧. ಕೌತುಕ |
| ೪. ಪ್ರಕಾಶನ | ೮. ಆಗಮ | ೧೨. ನಿದ್ರಾ |

೭೬. * ಸ್ವೋಚ್ಚಗೋ ದೀಪ್ತ: ಸ್ವಭಗ: ಸ್ವಸ್ಥೋ ಹಿತಭಗೋ ಹಾಸ್ಯ-
ಯುಕ್ತ: ಶುಭವರ್ಗಗ: ಶಾಂತ: ಸ್ಫುರದ್ರಶ್ಮಿ: ಶಕ್ತೋ ಮೂಢೋ
ಲುಪ್ತೋ ನೀಚಗೋ ದೀನ: ಪಾಪಶತ್ರುಭಗ: ಪೀಡಿತ: ||

ಗ್ರಹಕ್ಕೆ – ೧. ಉಚ್ಚಕ್ಷೇತ್ರದಲ್ಲಿ ದೀಪ್ತಾವಸ್ಥೆ, ೨. ಸ್ವರಾಶಿಯಲ್ಲಿ ಸ್ವಸ್ಥಾ, ೩. ಮಿತ್ರ ರಾಶಿಯಲ್ಲಿ ಸುಖಿ, ೪. ಶುಭವರ್ಗದಲ್ಲಿ ಶಾಂತ, ೫. ಪ್ರಕಾಶಮಾನವಾಗಿದ್ದರೆ ಶಕ್ತ, ೬. ಅಸ್ತಂಗತನಾದರೆ ಲುಪ್ತ, ೭. ನೀಚದಲ್ಲಿ ದೀನ, ೮. ಶತ್ರುವಿನ ಅಂಶದಲ್ಲಿ ಪೀಡಿತ.

|| ಇತಿ ಮಹಾದೇವಕೃತ ಜಾತಕತತ್ತ್ವೇ ಸಂಜ್ಞಾತತ್ತ್ವಂ ಪ್ರಥಮಂ ||



# ೨. ಸೂತಿಕಾತತ್ವಂ

೧. * ಚಂದ್ರೇಣಾದೃಷ್ಟೇಽಗೇ ಪಿತುಃ ಪರೋಕ್ಷೇ ಜನ್ಮ ||

ಲಗ್ನವನ್ನು ಚಂದ್ರನು ನೋಡದೆ ಇದ್ದರೆ ಜನ್ಮವು ತಂದೆಯ ಪರೋಕ್ಷದಲ್ಲಾಗಿರಬೇಕು.

೨. * ಸ್ಥಿರೇಽರ್ಕೇಽಷ್ಟಮಾಂಕಾಯಾನ್ತ್ಯೇ ಚಂದ್ರೇಣ ಚಾದೃಷ್ಟೇಽಂಗೇ ಸ್ವದೇಶಸ್ಥಪಿತುಃ ಪರೋಕ್ಷಂ ಜನ್ಮ ||

ರವಿಯು ಲಗ್ನಕ್ಕೆ ೮, ೯, ೧೧, ೧೨ ನೆಯ ಸ್ಥಾನಗಳಲ್ಲಿದ್ದು, ಲಗ್ನವನ್ನು ಚಂದ್ರನು ನೋಡದಿದ್ದರೆ ತಂದೆಯು ಜನನದ ಊರಿನಲ್ಲೇ ಇರುವನು. ಆದರೂ ಜನನವು ತಂದೆಯ ಪರೋಕ್ಷದಲ್ಲಾದಲ್ಲಿ ರವಿಯು ಸ್ಥಿರರಾಶಿಯಲ್ಲಿರಬೇಕು.

೩. * ಚರೇಽರ್ಕೇತು ಪ್ರಾಗ್ಯಜ್ಞಾತಸ್ಯ ಪಿತರಿ ವಿದೇಶಂ ಗತೇ ಜನ್ಮ ||

ಹಿಂದಿನ ಸೂತ್ರದಲ್ಲಿ ರವಿಯು ಚರರಾಶಿಯಲ್ಲಿದ್ದರೆ, ತಂದೆಯು ಪರದೇಶದಲ್ಲಿದ್ದಾಗ ಜನನ.

೪. * ಮಂದೇಽಂಗೇ ವಾಸ್ತೇ ಭೌಮೇ ಪಿತುಃ ಪರೋಕ್ಷಂ ಜನ್ಮ: ||

ಶನಿಯು ಲಗ್ನದಲ್ಲಿ ಅಥವಾ ಕುಜನು ಸಪ್ತಮದಲ್ಲಿ ಇದ್ದರೆ, ಜನನ ಕಾಲದಲ್ಲಿ ತಂದೆಯಿರುವುದಿಲ್ಲ.

೫. * ಜ್ಞಾಚ್ಛಾಂತರೇ ಚಂದ್ರೇಽಪಿ ||

ಚಂದ್ರನು ಬುಧ – ಶುಕ್ರರ ನಡುವೆ ಇದ್ದರೂ ಹಾಗೆಯೇ.

೬. * ಭೌಮತ್ರ್ಯಂಶೇ ಚಂದ್ರೇ ಪಾಪಲಗ್ನೇ ಶುಭಾಃ ಸ್ವಾಯಗಾಃ ಸರ್ಪವೇಷ್ಟಿತೋ ಜಾತಃ ||

ಪಾಪಲಗ್ನವಾಗಿ ಚಂದ್ರನು ಕುಜದ್ರೇಕ್ಕಾಣದಲ್ಲಿದ್ದು ೨–೧೧ರಲ್ಲಿ ಶುಭಗ್ರಹಗಳಿದ್ದರೆ, ಮಗುವಿಗೆ ಸರ್ಪವೇಷ್ಟನವಿರುವುದು.

೭. * ಚತುಷ್ಪದೇಽರ್ಕೇ ಶೇಷೇಷು ಸಬಲೇಷು ದ್ವ್ಯಂಗಗೇಷು ಯಮಲಜನ್ಮ ॥

ರವಿಯು ಚತುಷ್ಪದರಾಶಿಯಲ್ಲಿದ್ದು, ಉಳಿದ ಗ್ರಹಗಳು ಬಲಿಷ್ಠರಾಗಿ ದ್ವಿಸ್ವಭಾವ ನವಾಂಶಗಳಲ್ಲಿದ್ದರೆ ಅವಳಿ ಜನನವಾಗುವುದು.

೮. * ವೃಷಾಜಸಿಂಹೇಽಂಗೇ ಮಂದೇ ವಾ ಭೌಮೇ ಭಾಂಶ ತುಲ್ಯೇಽವಯವೇ ನಾಲವೇಷ್ಟಿತಃ ॥

ವೃಷಭ, ಮೇಷ ಅಥವಾ ಸಿಂಹವು ಲಗ್ನವಾಗಿ ಅದರಲ್ಲಿ ಶನಿಯಾಗಲಿ-ಕುಜನಾಗಲಿ ಇದ್ದರೆ, ಲಗ್ನವು ಕಾಲಪುರುಷನ ಯಾವ ಅಂಗವೋ ಆ ಅಂಗದಲ್ಲಿಯಾಗಲಿ, ಲಗ್ನನವಾಂಶವು ಯಾವ ಅಂಗವೋ ಆ ಅಂಗದಲ್ಲಿ ಆಗಲಿ, ಜಾತಕನಿಗೆ ನಾಳವೇಷ್ಟನವಿರುವುದು.

೯. * ಸೂರ್ಯಾತ್ ತ್ರಿಕೋಣಸ್ತಗೌ ಮಂದಾರೌ ಪಾಪಭಗೌ ಜನ್ಮನಿ ಪಿತಾ ಬದ್ಧಃ ॥

ಶನಿ – ಕುಜರು ಪಾಪರಾಶಿಗಳಲ್ಲಿದ್ದು, ರವಿಯಿಂದ ೫, ೯, ೭ನೆಯ ಮನೆಗಳಲ್ಲಿದ್ದರೆ, ಜನನ ಕಾಲದಲ್ಲಿ ತಂದೆಯು ಸ್ವಾತಂತ್ರ್ಯರಹಿತನಾಗಿರುವನು.

೧೦. * ಪೂರ್ಣೇಂದೌ ಕರ್ಕೇ ಜ್ಞೇ ಲಗ್ನೇ ಜೀವೇ ತುರ್ಯೇ ನೌಕಾಜನ್ಮ ॥

ಪೂರ್ಣಚಂದ್ರನು ಕಟಕದಲ್ಲಿದ್ದು, ಲಗ್ನದಲ್ಲಿ ಬುಧನಿದ್ದು, ಗುರುವು ೪ರಲ್ಲಿದ್ದರೆ ದೋಣಿಯಲ್ಲಿ ಜನನ.

೧೧. * ಜಲಭೇಽಂಗೇಽಸ್ತೇ ಪೂರ್ಣೇಂದೌ ಜಲಾಸನ್ನೇ ಜನ್ಮ ॥

ಲಗ್ನವು ಜಲರಾಶಿಯಾಗಿ, ಪೂರ್ಣಚಂದ್ರನು ಸಪ್ತಮದಲ್ಲಿದ್ದರೆ ಜನನವು ನೀರಿನ ಸಮೀಪದಲ್ಲಿ.

೧೨. * ಜಲಭಗಾವಂಗಚಂದ್ರೌ ಜಲಾಸನ್ನೇ ಜನ್ಮ ॥

ಲಗ್ನ ಚಂದ್ರರಿಬ್ಬರೂ ಜಲರಾಶಿಗಳಲ್ಲಿದ್ದರೆ, ಜನನವು ನೀರಿನ ಸಮೀಪದಲ್ಲಿ.

೧೩. * ಜಲಭಾಗೇ ಚಂದ್ರೇ ವಾಂಬುಸ್ಥೇ ಜಲಾಸನ್ನೇ ಜನ್ಮ ॥

ಚಂದ್ರನು ಜಲರಾಶಿಯಲ್ಲಾಗಲೀ, ಚತುರ್ಥದಲ್ಲಿಯಾಗಲಿ ಇದ್ದರೂ ಅದೇ ಫಲ.

೧೪. * ಚಂದ್ರೇಂಗೇ ಮಂದೇಽತ್ಯೇ ಪಾಪದೃಷ್ಟೇ ಕಾರಾಗಾರೇ ಜನ್ಮ ॥

ಲಗ್ನದಲ್ಲಿ ಚಂದ್ರನಿದ್ದು, ವ್ಯಯದಲ್ಲಿರುವ ಶನಿಯನ್ನು ಪಾಪಗ್ರಹವು ನೋಡಿದರೆ, ಬಂದೀಖಾನೆಯಲ್ಲಿ ಜನನ.

೧೫. * ಕರ್ಕಾಳ್ಯಂಗೇಽರ್ಕಜೇ ಚಂದ್ರದೃಷ್ಟೇ ಗರ್ತೇ ಜನ್ಮ ॥

ಕಟಕ ವೃಶ್ಚಿಕಗಳಲ್ಲೊಂದು ಲಗ್ನವಾಗಿ, ಅಲ್ಲಿ ಶನಿಯಿದ್ದು, ಆ ಶನಿಯನ್ನು ಚಂದ್ರನು ನೋಡಿದರೆ, ಗುಣಿಯಲ್ಲಿ ಜನನ.

೧೬. * ಜಲಭೇ ಮಂದೇಽಂಗೇ ಜ್ಞದೃಷ್ಟೇ ಕ್ರೀಡಾಲಯೇಽರ್ಕದೃಷ್ಟೇ ದೇವಾಲಯೇ ಚಂದ್ರದೃಷ್ಟೇ ಸಶರ್ಕರಾವನ್ಯಾಂ ಜನ್ಮ ॥

ಲಗ್ನವು ಜಲರಾಶಿಯಾಗಿ ಅಲ್ಲಿ ಶನಿಯಿದ್ದು ಬುಧ, ರವಿ ಅಥವಾ ಚಂದ್ರನಿಂದ ನೋಡಲ್ಪಟ್ಟರೆ, ಜನನವು ಕ್ರಮವಾಗಿ ಆಟದಸ್ಥಳ, ದೇವಾಲಯ ಅಥವಾ ಉಪ್ಪುಭೂಮಿಯಲ್ಲಿ ಆಗುವುದು.

೧೭. * ನೃಲಗ್ನೇ ಮಂದೇ ಕುಜದೃಷ್ಟೇ ಶ್ಮಶಾನೇ ಸಿತೇಂದು ದೃಷ್ಟೇ ರಮಣೀಯಗೃಹೇಗುರುದೃಷ್ಟೇಽಗ್ನಿಶಾಲಾಯಾಂ ರವಿದೃಷ್ಟೇ ನರೇಂದ್ರಾಮರಾಲಯಗೋಕುಲಾನ್ಯತಮೇಜ್ಞ ದೃಷ್ಟೇ ಶಿಲ್ಪಾಲಯೇ ಜನ್ಮ ॥

ಲಗ್ನವು ನರರಾಶಿಯಾಗಿ ಅದರಲ್ಲಿ ಶನಿಯಿದ್ದು, ಆ ಶನಿಯನ್ನು ಅಂಗಾರಕನು ನೋಡಿದರೆ ಜನನವು ರುದ್ರಭೂಮಿಯಲ್ಲಿ, ಶುಕ್ರ–ಚಂದ್ರರು ನೋಡಿದರೆ ಸುಂದರವಾದ ಸ್ಥಳದಲ್ಲಿ, ಗುರುವು ನೋಡಿದರೆ ಅಗ್ನಿಶಾಲೆಯಲ್ಲಿ, ರವಿ ನೋಡಿದರೆ ಅರಮನೆ, ದೇವಾಲಯ ಅಥವಾ ಹಸುಗಳ ಕೊಟ್ಟಿಗೆಯಲ್ಲಿ, ಬುಧನು ನೋಡಿದರೆ ಶಿಲ್ಪ ಗೃಹದಲ್ಲಿ ಜನನ.

೧೮. * ಮಂದಾರಾಭ್ಯಾಂ ಪಂಚಮೇಽಸ್ತೇಽಂಕೇ ಚಂದ್ರೇ ಮಾತ್ರಾತ್ಯಜತೇ ಗುರುದೃಷ್ಟೇ ತು ಚಂದ್ರೇ ದೀರ್ಘಾಯುಃ ॥

ಒಂದೇ ಕಡೆಯಿರುವ ಕುಜ–ಶನಿಗಳಿಂದ ೫, ೭, ೯ನೆಯ ಕಡೆಯಲ್ಲಿ ಇಂದ್ರನಿದ್ದರೆ ತಾಯಿಯು ಮಗುವನ್ನು ಬಿಟ್ಟುಬಿಡುವಳು. ಆ ಚಂದ್ರನನ್ನು ಗುರುವು ನೋಡಿದರೆ ಮಗುವಿಗೆ ದೀರ್ಘಾಯುಸ್ಸು.

೧೯. * ಪಾಪದೃಷ್ಟೇ ಚಂದ್ರೇಽಂಗೇಽಸ್ತೇ ಭೌಮೇ ಮಾತ್ರಾತ್ಯಕ್ತೋ ವಿನಶ್ಯತಿ ॥

ಚಂದ್ರನು ಲಗ್ನದಲ್ಲಿದ್ದು ಪಾಪದೃಷ್ಟಿಯಿಂದ ಕೂಡಿದ್ದಾಗ, ಅಂಗಾರಕನು ಸಪ್ತಮದಲ್ಲಿದ್ದರೆ, ತಾಯಿಯಿಂದ ಬಿಡಲ್ಪಟ್ಟು ಮಗುವು ನಾಶವಾಗುತ್ತದೆ.

೨೦. * ಪಾಪದೃಷ್ಟೇಂಗೇ ಚಂದ್ರೇ ಮಂದಾರೌ ಲಾಭೇ ಮಾತೃತ್ಯಕ್ತೋ ವಿನಶ್ಯತಿ ॥

ಪಾಪದೃಷ್ಟಿಯಿಂದ ಕೂಡಿದ ಚಂದ್ರನು ಲಗ್ನದಲ್ಲಿದ್ದಾಗ, ಲಾಭಸ್ಥಾನದಲ್ಲಿ ಶನಿ–ಕುಜರಿದ್ದರೆ ತಾಯಿಯಿಂದ ಬಿಡಲ್ಪಟ್ಟು ಮಗುವು ನಾಶವಾಗುತ್ತದೆ.

೨೧. * ಮಾತಾಪಿತೃಗ್ರಹಯೋರ್ಯೋ ಬಲೀ ತತ್ಸಂಬಂಧಿ ಗೃಹೇ ಜನ್ಮ ॥

ಮಾತೃಗ್ರಹ ಪಿತೃಗ್ರಹಗಳಲ್ಲಿ ಯಾರು ಬಲಿಷ್ಠರೋ ಆ ಗ್ರಹ ಸಂಬಂಧವಾದ ಮನೆಯಲ್ಲಿ ಜನನ.

೨೨. * ಸೌಮ್ಯಾಃ ಸರ್ವೇ ನೀಚಗಾಃ ವೃಕ್ಷನದೀಪ್ರಾಕಾರಾದಿಷು ಜನ್ಮ ॥

ಶುಭಗ್ರಹಗಳೆಲ್ಲಾ ನೀಚಸ್ಥಾನಗಳಲ್ಲಿದ್ದರೆ, ಜನನವು ಮರ, ನದೀ ಪ್ರಾಕಾರ ಇಂತಹ ಪ್ರದೇಶಗಳಲ್ಲಾಗುವುದು.

೨೩. * ನೀಚಗೇಷು ಶುಭೇಷು ಚಂದ್ರೇಽಂಗೇ ಗ್ರಹಮಾತ್ರಾ ದೃಷ್ಟೇಽಟವ್ಯಾಂ ಜನ್ಮ ॥

ಶುಭಗ್ರಹಗಳು ನೀಚದಲ್ಲಿದ್ದು, ಚಂದ್ರನಾಗಲೀ ಲಗ್ನವಾಗಲಿ ಗ್ರಹದಿಂದ ನೋಡಲ್ಪಡದಿದ್ದರೆ, ಅಡವಿಯಲ್ಲಿ ಜನನ.

೨೪. * ಚಂದ್ರೇ ತುರ್ಯೇ ವಾ ಮಂದಯುತ ದೃಷ್ಟೇ ವಾ ಜಲ ಭೌಶೇಽಂಧಕಾರೇ ಜನ್ಮ ॥

ಚಂದ್ರನು ೪ರಲ್ಲಿರಲಿ, ಶನಿಯು ಯುತಿ ಅಥವಾ ವೀಕ್ಷಣೆಯಿಂದ ಕೂಡಿರಲಿ, ಜಲರಾಶಿಯಲ್ಲಿರಲಿ ಕತ್ತಲಿನಲ್ಲಿ ಜನನ.

೨೫. * ಸಬಲೇsರ್ಕೇ ಭೌಮದೃಷ್ಟೇ ಬಹುದೋಷಗೃಹೇ ಜನ್ಮ ॥

ರವಿಯು ಬಲಿಷ್ಠನಾಗಿ ಕುಜನಿಂದ ನೋಡಲ್ಪಟ್ಟರೆ ಜನನವು ಅನೇಕ ದೋಷಗಳಿಂದ ಕೂಡಿದ ಮನೆಯಲ್ಲಿ ಆಗುವುದು.

೨೬. * ಚಂದ್ರಾತ್ತೈಲಜ್ಞಾನಂ ॥

ತೈಲಜ್ಞಾನವು ಚಂದ್ರನಿಂದ

೨೭. * ಲಗ್ನಾದ್ದೀಪವರ್ತಿ ಜ್ಞಾನಂ ॥

ಲಗ್ನದಿಂದ ದೀಪದ ಬತ್ತಿಯನ್ನು ತಿಳಿಯಬೇಕು.

೨೮. * ಚರೇsರ್ಕೇ ಚರಃ ಸ್ಥಿರೇsರ್ಕೇ ಸ್ಥಿರೋ ದ್ವಿಸ್ವಭಾವೇ ಖಂಡವ-ದ್ದೀಪಃ ॥

ರವಿಯು ಚರರಾಶಿಯಲ್ಲಿದ್ದರೆ ಚರದೀಪ: ಸ್ಥಿರರಾಶಿಯಲ್ಲಿದ್ದರೆ ಸ್ಥಿರ ದೀಪ: ದ್ವಿಸ್ವಭಾವರಾಶಿಯಲ್ಲಿದ್ದರೆ ಇನ್ನೊಂದು ಸ್ಥಳಕ್ಕೆ ತೆಗೆದುಕೊಂಡು ಹೋಗಬಹುದಾದ ದೀಪ.

೨೯. * ಶೀರ್ಷೋದಯಾಂಗೇ ಮೂರ್ದ್ಧತಃ ಪ್ರಸವ ಉಭಯೋದಯಾಂಶೇ ಹಸತ್ತೋsನ್ಯಥಾ ಪಾದತಃ ॥

ಲಗ್ನವು ಶೀರ್ಷೋದಯವಾದರೆ ತಲೆಯಿಂದಲೂ, ಉಭಯೋದಯ ವಾದರೆ ಕಾಲುಗಳಿಂದಲೂ ಜನನ.

೩೦. * ಲಗ್ನಚಂದ್ರಾನ್ಯತರತೋ ಬಂಧ್ವಸ್ತಗೇಷು ಕ್ರೂರೇಷು ಮಾತುಃ ಕಷ್ಟಂ ॥

ಲಗ್ನದಿಂದಾಗಲಿ, ಚಂದ್ರನಿಂದಾಗಲಿ ೪ ಮತ್ತು ೭ನೆಯ ಮನೆಗಳಲ್ಲಿ ಪಾಪಗ್ರಹಗಳಿದ್ದರೆ ತಾಯಿಗೆ ಕಷ್ಟ.

೩೧. * ಕೇಂದ್ರಗಸ್ಯವಾ ಬಲಿನೋ ಗ್ರಹಸ್ಯ ದಿತಿ ಗೃಹದ್ವಾರಂ ॥

ಕೇಂದ್ರಗ್ರಹದ ಅಥವಾ ಬಲಿಷ್ಠವಾದ ಗ್ರಹದ ದಿಕ್ಕಿನಲ್ಲಿ ಬಾಣಂತಿಯ ಮಲಗುವ ಮನೆಯ ಬಾಗಿಲಿರಬೇಕು.

೩೨. * ಕಾಷ್ಠಾಢ್ಯಂ ನವಂ ದಗ್ಧಂ ಚಿತ್ರಂ ದೃಢಂ ರಮ್ಯಂ ಜೀರ್ಣಂ ಕ್ರಮಾದರ್ಕಾದಿಷು ಯೋ ಬಲೀ ತದನುಸಾರಿ ಗೃಹಂ ॥

ರವ್ಯಾದಿ ಗ್ರಹಕ್ರಮದಲ್ಲಿ ಯಾವ ಗ್ರಹವು ಬಲಿಷ್ಠನೋ ಅವನಿಗೆ ಅನುಸಾರವಾಗಿ ಮನೆಯು – ಹೆಚ್ಚು ಮರದಿಂದ ಕೂಡಿರುವ – ಹೊಸದಾದ – ಬೆಂಕಿ ಬಿದ್ದ – ಚಿತ್ರವಿಚಿತ್ರವಾದ – ಭದ್ರವಾದ –ರಮ್ಯವಾದ – ಹಳೆಯದಾದ ಮನೆಯಾಗಿರುವುದು.

೩೩. * ವೃಷಾಜಯೋರುದಯೇ ಗೃಹಸ್ಯ ಪೂರ್ವಭಾಗೇ ಯುಗ್ಮ-ಸ್ತ್ವಾಗ್ನೇಯ್ಯಾಂ ಕರ್ಕ ಸಿಂಹಯೋರ್ಯಾಮ್ಯೇ ಕನ್ಯಾಯಾಂ ನೈರೃತೇ ತುಲಾ ವೃಶ್ಚಿಕಯೋಃ ಪಶ್ಚಿಮೇ ಧನುಷೋ ವಾಯೌ ಮಂದ ಭಯೋರುತ್ತರೇ ಝಷಸ್ಯೇಶಾನ್ಯಾಂ ಜನ್ಮ ॥

ಮೇಷ – ವೃಷಭಗಳಲ್ಲೊಂದು ಲಗ್ನವಾದರೆ ಮಲಗುವ ಮನೆಯು ಮನೆಯ ಪೂರ್ವಭಾಗದಲ್ಲಿಯೂ; ಮಿಥುನವಾದರೆ ಆಗ್ನೇಯದಲ್ಲಿಯೂ, ಕರ್ಕ – ಸಿಂಹಗಳಲ್ಲೊಂದಾದರೆ ದಕ್ಷಿಣದಲ್ಲಿಯೂ; ಕನ್ಯೆಯಾದರೆ ನೈಋತ್ಯದಲ್ಲಿಯೂ; ತುಲಾ – ವೃಶ್ಚಿಕಗಳಲ್ಲೊಂದಾದರೆ ಪಶ್ಚಿಮದಲ್ಲಿಯೂ; ಧನುಸ್ಸು ಆದರೆ ವಾಯುವ್ಯ ದಿಕ್ಕಿನಲ್ಲಿಯೂ, ಮಕರ ಕುಂಭಗಳಾದರೆ ಉತ್ತರದಲ್ಲಿಯೂ; ಮೀನವಾದರೆ ಈಶಾನ್ಯದಲ್ಲಿಯೂ ಇರುವುದು.

೩೪. * ಏವಂ ಶಯ್ಯಾಜ್ಞಾನಂ ॥

ಈ ಪ್ರಕಾರವಾಗಿ ಹಾಸಿಗೆಯ ವಿಷಯ.

೩೫. * ಲಗ್ನದಿಶಿ ಶಯ್ಯಾ ಶಿರಸ್ತ್ರಿಷಡಂಕಾನ್ತ್ಯೇಷು ಪಾದಾಃ ॥

ಲಗ್ನದ ದಿಕ್ಕಿನಲ್ಲಿ ಮಂಚದ ಮೇಲುಭಾಗ, ೩–೬–೯–೧೨ನೆಯ ಮನೆಗಳು ಕಾಲುಗಳು.

೩೬. * ಯತ್ರ ಪಾಪಸ್ತತ್ರೋದ್ಘಾಟಃ ॥

೩–೬–೯–೧೨ನೆಯ ಮನೆಗಳಲ್ಲಿ ಎಲ್ಲಿ ಪಾಪಗ್ರಹವೋ ಆ ಕಾಲು ಕೆಟ್ಟುಹೋಗಿರುವುದು.

೩೭. * ಲಗ್ನಚಂದ್ರಾಂತರಗ್ರಹಸಂಖ್ಯಾ ಉಪಸೂತಿಕಾ ಉದಗರ್ಧೇಽಭ್ಯಂತರಗಾ ದಕ್ಷಿಣಾರ್ಧೇ ಬಾಹ್ಯಾಃ ||

ಲಗ್ನಕ್ಕೂ ಚಂದ್ರನಿಗೂ ನಡುವೆ ಎಷ್ಟು ಗ್ರಹಗಳಿವೆಯೋ ಅಷ್ಟು ಜನ ಹೆಂಗಸರು ಬಾಣಂತಿಯ ಹತ್ತಿರವಿರುವರು; ಭ – ಚಕ್ರದ ಉತ್ತರಾರ್ಧದಲ್ಲಿರುವವರು; ಬಾಣಂತಿಯ ಕೊಠಡಿಯೊಳಗಿರುವವರು; ದಕ್ಷಿಣಾರ್ಧಗಲ್ಲಿರುವವರು; ಹೊರಗಡೆ ಇರುವವರು.

೩೮. * ವಕ್ರೋಚ್ಚ ಸಂಸ್ಥೈಸ್ತ್ರಿಗುಣಾ ಸ್ವರ್ಕ್ಷತ್ರ್ಯಂಶನವಾಂಶೇ ಸ್ಥಿತೈರ್ದ್ವಿಗುಣಾ ನೀಚಸ್ಥಗೈರರ್ಧಮಿತಾ ಉಪಸೂತಿಕಾಃ ||

ಹಿಂದೆ ಹೇಳಿದ ಹೆಂಗಸರ ಸಂಖ್ಯೆಯನ್ನು ಕಂಡುಹಿಡಿಯುವಾಗ, ವಕ್ರ ಅಥವಾ ಉಚ್ಚಗ್ರಹವಿದ್ದರೆ ಸಂಖ್ಯೆ ೩ರಷ್ಟು ; ಸ್ವಕ್ಷೇತ್ರ ಸ್ವನವಾಂಶ ಸ್ವದ್ರೇಕ್ಕಾಣ ಗ್ರಹಗಳಿದ್ದರೆ ಸಂಖ್ಯೆಯು ೨ರಷ್ಟು ; ನೀಚ ಅಥವಾ ಮೂಢಗ್ರಹವಿದ್ದರೆ ಅರ್ಧದಷ್ಟು ಹೇಳಬೇಕು.

೩೯. * ಮೀನಾಜಾಂಗೇ ದ್ವೇ ಗೋಘಟಾಂಗೇ ಚತಸ್ರಃ ಕರ್ಕಹ ಯಾಂಗೇ ಪಂಚಶೇಷೇ ತಿಸ್ರ ಉಪಸೂತಿಕಾಃ ||

ಲಗ್ನವು ಮೀನ – ಮೇಷಗಳಾದರೆ ಇಬ್ಬರು ಹೆಂಗಸರು; ವೃಷಭ – ಕುಂಭಗಳಾದರೆ ೪; ಕರ್ಕ ಧನುಸ್ಸುಗಳಾದರೆ ೫; ಉಳಿದುವಾದರೆ ೩.

೪೦. * ಗೋಜಾಶ್ವಿಯುಗ್ಮಸಿಂಹಾಂಗೇ ಬಹುರುದಿತೋ ಜಾತೋಽನ್ಯಥಾನ ||

ವೃಷಭ, ಮೇಷ, ಧನುಸ್ಸು, ಮಿಥುನ, ಸಿಂಹಗಳಲ್ಲಿ ಹುಟ್ಟಿದ ಮಗುವು ಬಹಳ ಅಳುತ್ತದೆ. ಇತರ ಲಗ್ನಗಳಲ್ಲಿ ಹುಟ್ಟಿದರೆ ಅಳುವುದಿಲ್ಲ.

೪೧. * ಅಂಗೇ ಚಂದ್ರೇ ಗ್ರಹಮಾತ್ರಾಪ್ರೇಕ್ಷೇ ನಿರ್ಜನೇ ಪ್ರಸವಃ ||

ಲಗ್ನದಲ್ಲಿ ಚಂದ್ರನಿದ್ದು ಅವನನ್ನು ಗ್ರಹವೇ ನೋಡದಿದ್ದರೆ, ಜನನವು ನಿರ್ಜನ ಪ್ರದೇಶದಲ್ಲಿ.

೪೨. * ಖಾಂಬುಗೇಷು ಶುಭೇಷು ಸುಖೇನ ಪ್ರಸವಸ್ತ್ರಿಕೋಣಾಸ್ತಗೇಷು ಪಾಪೇಶು ಕಷ್ಟತಃ ||

೧೦–೪ರಲ್ಲಿ ಶುಭರಿದ್ದರೆ ಜನನವು ಸುಲಭ. ೫–೭–೯ರಲ್ಲಿ ಪಾಪ ಗ್ರಹಗಳಿದ್ದರೆ ಬಹಳ ಕಷ್ಟ ಪ್ರಸವ.

೪೩. * **ತುರ್ಯೇ ಖೇ ವಾ ಮಂದಾರಾರ್ಕ ಯೋಗೇ ಜನ್ಮತಃ ಪ್ರಾಕ್-ಪಿತೃಮರಣಂ ॥**

ಜನನ ಕಾಲದಲ್ಲಿ ೪ರಲ್ಲಿ ಅಥವಾ ೧೦ರಲ್ಲಿ ಶನಿ – ಕುಜರ ಯೋಗವಿದ್ದರೆ ಜನನಕ್ಕೆ ಮುಂಚೆ ತಂದೆಯ ಮರಣ.

೪೪. * **ಲಗ್ನಷಷ್ಠಾಸ್ತಾಷ್ಟಮಗಾಃ ಪಾಪಾ ಮಾತ್ರಾ ಸಹ ಬಾಲ ಸ್ಯಮೃತಿಃ ॥**

೧–೬–೭–೮ನೆಯ ಮನೆಗಳಲ್ಲಿ ಪಾಪಗ್ರಹಗಳಿದ್ದರೆ, ತಾಯಿ ಸಹಿತ ಮಗುವಿಗೆ ಮರಣ.

೪೫. * **ಗ್ರಸ್ತೇ ಚಂದ್ರೇ ಸಮಂದೇ ಲಗ್ನಾಷ್ಟಮೇ ಭೌಮೇ ಮಾತ್ರಾ ಸಹ ಬಾಲಸ್ಯ ಮೃತಿಃ ॥**

ಗ್ರಹಣ ಚಂದ್ರನು ಲಗ್ನದಲ್ಲಿ ಶನಿಸಮೇತನಾಗಿದ್ದು, ಅಂಗಾರಕನು ೮ ರಲ್ಲಿದ್ದರೆ, ತಾಯಿ ಸಹಿತ ಮಗುವು ಸಾಯುವುದು.

೪೬. * **ಗ್ರಸ್ತೇರ್ಕೇ ಮಂದಜ್ಞಾನ್ಯತರಯುತೇ ರಂಧ್ರಾಂಗೇ ಕುಜೇಮಾತ್ರಾ ಸಹ ಬಾಲಸ್ಯ ಮೃತಿಃ ॥**

ಗ್ರಹಣ ಸೂರ್ಯನು ಶನಿ ಅಥವಾ ಬುಧಸಮೇತನಾಗಿ ಲಗ್ನದಲ್ಲಿದ್ದು, ಅಂಗಾರಕನು ಲಗ್ನದಲ್ಲಿಯಾಗಲಿ, ೮ರಲ್ಲಿಯಾಗಲಿ ಇದ್ದರೆ ತಾಯಿ ಸಮೇತ ಮಗು ಸಾಯುವುದು.

೪೭. * **ಭೌಮಭೇ ಅರ್ಕಾರವಮಂದೇ ಇಂದುದೃಷ್ಟೇಽಷ್ಟಮೇ ಚೇಜ್ಯೇ ಬಾಲಕಸ್ಯ ಮಹಾಕಷ್ಟಂ ॥**

ರವಿ, ಕುಜ ಅಥವಾ ಶನಿಗಳಲ್ಲೊಬ್ಬನು ಅಂಗಾರಕನ ಮನೆಯಲ್ಲಿದ್ದು ಚಂದ್ರನಿಂದ ನೋಡಲ್ಪಟ್ಟಾಗ, ಗುರುವು ೮ರಲ್ಲಿದ್ದರೆ ಮಗುವಿಗೆ ಮಹಾಕಷ್ಟ.

೪೮. * **ವ್ಯಯಾರೀ ಪಾಪಯುತೌ ಬಾಲಸ್ಯ ಸದ್ಯೋ ಮೃತಿಃ ॥**

೧೨ ಮತ್ತು ೬ರಲ್ಲಿ ಪಾಪಿಗಳಿದ್ದರೆ, ಮಗುವಿಗೆ ಹುಟ್ಟುತ್ತಲೇ ಮರಣ.

೪೯. * ಲಗ್ನೇಶೇ ಸಾರ್ಕೇ ನೀಚಗೇ ರಂಧ್ರೇಶೇ ಬಾಲಸ್ಯ ಸದ್ಯೋಮೃತಿಃ ॥
ಲಗ್ನಾಧಿಪತಿಯು ರವಿಯೊಂದಿಗಿದ್ದು, ಅಷ್ಟಮಾಧಿಪತಿಯು ನೀಚದಲ್ಲಿದ್ದರೆ ಮಗುವಿಗೆ ಹುಟ್ಟುತ್ತಲೇ ಮರಣ.

೫೦. * ರಾಹೌ ಕೇಂದ್ರೇ ಪಾಪಮಾತ್ರಯುತದೃಷ್ಟೇ ಬಾಲಸ್ಯ ಸದ್ಯೋಮೃತಿಃ ॥
ರಾಹುವು ಕೇಂದ್ರದಲ್ಲಿದ್ದು, ಪಾಪಗ್ರಹಗಳಿಂದ ಮಾತ್ರ ಕೂಡಿದ್ದರೂ, ನೋಡಲ್ಪಟ್ಟರೂ, ಮಗುವಿಗೆ ಹುಟ್ಟುತ್ತಲೇ ಮರಣ.

೫೧. * ನಗೇಽರ್ಕೇಽಂಗೇ ಮಂದೇಽಷ್ಟಮೇ ಭೌಮೇ ಬಾಲಸ್ಯ ಸದ್ಯೋ-ಮೃತಿಃ ॥
ರವಿಯು ಸ್ಥಿರರಾಶಿಯಲ್ಲಿ, ಶನಿಯು ಲಗ್ನದಲ್ಲಿ, ಅಂಗಾರಕನು ಅಷ್ಟಮದಲ್ಲಿ ಇದ್ದರೆ ಮಗುವಿಗೆ ಹುಟ್ಟುತ್ತಲೇ ಮರಣ.

೫೨. * ಮಂದಾರಭೇ ಖೇಽರ್ಕೇ ಪಾಪೈರ್ದೃಷ್ಟೇ ಬಾಲಸ್ಯ ಸದ್ಯೋಮೃತಿಃ ॥
೧೦ನೆಯ ಮನೆಯು ಶನಿಯದಾಗಿ ಅಥವಾ ಕುಜನದಾಗಿ, ಅಲ್ಲಿ ಪಾಪಿಗಳಿಂದ ನೋಡಲ್ಪಟ್ಟ ರವಿಯಿದ್ದರೆ ಮಗುವಿಗೆ ಹುಟ್ಟುತ್ತಲೇ ಮರಣ.

೫೩. * ಷಷ್ಠಾಷ್ಟಮೇ ಚಂದ್ರೇ ಪಾಪೈರ್ದೃಷ್ಟೇ ಬಾಲಸ್ಯ ಸದ್ಯೋಮೃತಿಃ ॥
ಚಂದ್ರನು ೬ ಅಥವಾ ೮ರಲ್ಲಿದ್ದು ಪಾಪಿಗಳಿಂದ ನೋಡಲ್ಪಟ್ಟರೆ ಮಗುವಿಗೆ ಸದ್ಯೋಮರಣ.

೫೪. * ಚರಭಾಂಶೇ ಚಂದ್ರೇ ಶುಭೈರದೃಷ್ಟೇ ಕೋಣೇ ಪಾಪಾ ಬಾಲಸ್ಯ ಸದ್ಯೋಮೃತಿಃ ॥
ಚರರಾಶಿ ಅಥವಾ ಅಂಶದಲ್ಲಿ ಚಂದ್ರನಿದ್ದು, ಅವನನ್ನು ಶುಭರು ನೋಡದೆ, ಕೋಣದಲ್ಲಿ ಪಾಪಿಗಳಿದ್ದರೆ ಮಗುವಿಗೆ ಹುಟ್ಟುತ್ತಲೇ ಮರಣ.

೫೫. * ಮಂದರ್ಕೇಂದ್ವಾರಾ ವ್ಯಯಾಂಕಾಂಗಾಷ್ಟಮಗಾಃ ಸಬಲ ಗುರ್ವ - ದೃಷ್ಟಾಃ ಬಾಲಸ್ಯ ಸದ್ಯೋಮೃತಿಃ ॥
ಶನಿ, ರವಿ, ಚಂದ್ರ, ಕುಜರು ಕ್ರಮವಾಗಿ ೧೨-೯-೧-೮ರಲ್ಲಿದ್ದು ಅವರನ್ನು ಬಲಿಷ್ಠನಾದ ಗುರುವು ನೋಡದಿದ್ದರೆ, ಮಗುವಿಗೆ ಸದ್ಯೋಮರಣ.

೫೬. * ಕೋಣಾಂತ್ಯಾಸ್ತಾಂಗೇಷು ಪಾಪಯುತಶ್ಚಂದ್ರೋಬಲಿ ಶುಭಾಯುತ-ದೃಷ್ಟೋ ಬಾಲಸ್ಯ ಸದ್ಯೋಮೃತಿಃ ॥

ಪಾಪಗ್ರಹಗಳಿಂದ ಕೂಡಿದ ಚಂದ್ರನು ೫-೯-೧೨-೭-೧ರಲ್ಲಿದ್ದು ಆ ಚಂದ್ರನಿಗೆ ಬಲಿಷ್ಠರಾದ ಯುತಿ ಅಥವಾ ವೀಕ್ಷಣೆಯಿಲ್ಲದಿದ್ದರೆ, ಮಗುವಿಗೆ ಸದ್ಯೋಮರಣ.

೫೭. * ಚಂದ್ರೇಽಂಗೇಸ್ತೇ ಪಾಪಾ ಬಾಲಸ್ಯ ಸದ್ಯೋಮೃತಿಃ ॥

ಲಗ್ನದಲ್ಲಿ ಚಂದ್ರನಿದ್ದು ೭ರಲ್ಲಿ ಪಾಪಗ್ರಹಗಳಿದ್ದರೆ ಮಗುವಿಗೆ ಸದ್ಯೋಮರಣ.

೫೮. * ಮಂದಾದ್ರಂಧ್ರೇ ಬಲಿನಃ ಪಾಪ ಬಾಲಸ್ಯ ಸದ್ಯೋಮೃತಿಃ ॥

ಶನಿಯಿಂದ ೮ರಲ್ಲಿ ಬಲಿಷ್ಠರಾದ ಪಾಪಿಗಳಿದ್ದರೆ ಮಗುವಿಗೆ ಸದ್ಯೋಮರಣ.

೫೯. * ಕ್ಷೀಣೇಂದಾವಂಗೇ ಕೇಂದ್ರಾಷ್ಟಮಗಾಃ ಪಾಪಾಃ ಬಾಲಸ್ಯ ಸದ್ಯೋಮೃತಿಃ ॥

ಕ್ಷೀಣಚಂದ್ರನು ಲಗ್ನದಲ್ಲಿದ್ದು, ಪಾಪಗ್ರಹಗಳು ೧-೪-೭-೮-೧೦ ನೆಯ ಮನೆಯಲ್ಲಿದ್ದರೆ, ಮಗುವಿಗೆ ಸದ್ಯೋಮರಣ.

೬೦. * ಕರ್ಕಾಲ್ಯಂಗೇಽಖಿಲಾಃ ಪೂರ್ವಾರ್ಧೇ ಸೌಮ್ಯಾಃ ಪರಾರ್ಧೇ ವಾ ಲಗ್ನಾಸ್ತಾಷ್ಟಾಂತ್ಯೇ ಸ ಪಾಪೇಂದೌ ಶುಭಾದೃಷ್ಟೇ ಶುಭಾಯುತೇಷು ಕೇಂದ್ರೇಷು ಬಾಲಸ್ಯ ಸದ್ಯೋಮೃತಿಃ ॥

ಕಟಕ - ವೃಶ್ಚಿಕಗಳಲ್ಲೊಂದು ಲಗ್ನವಾಗಿ ಪಾಪಿಗಳು ಚಕ್ರಪೂರ್ವಾರ್ಧದಲ್ಲೂ, ಶುಭರು ಪರಾರ್ಧದಲ್ಲೂ ಇದ್ದು ಅಥವಾ ಪಾಪಯುತ ಚಂದ್ರನು ೧-೭-೮-೧೨ರಲ್ಲಿದ್ದು, ಕೇಂದ್ರಗಳಲ್ಲಿರುವ ಶುಭರ ವೀಕ್ಷಣೆಯಿಲ್ಲದಿದ್ದರೆ ಮಗುವಿಗೆ ಸದ್ಯೋಮರಣ.

೬೧. * ತ್ರಿಕೇ ಸೌಮ್ಯಾಃ ಕೇಂದ್ರೇ ಕೋಣೇ ಪಾಪಾ ಲಗ್ನೇಽರ್ಕೇ ಬಾಲಸ್ಯ ಸದ್ಯೋಮೃತಿಃ ॥

೬-೮-೧೨ರಲ್ಲಿ ಶುಭರಿದ್ದು , ಪಾಪಿಗಳು ಕೇಂದ್ರಕೋಣಗಳಲ್ಲಿದ್ದು, ಸೂರ್ಯನು ಲಗ್ನದಲ್ಲಿದ್ದರೆ ಮಗುವಿಗೆ ಸದ್ಯೋಮರಣ.

**೬೨. * ಚಂದ್ರಪಾಪಯುತೇಷು ಸರ್ವಕೇಂದ್ರೇಷು ಬಾಲಸ್ಯ ಸದ್ಯೋ-ಮೃತಿಃ ||**

ಚಂದ್ರನೂ, ಸಮಸ್ತ ಪಾಪಗ್ರಹಗಳೂ ಎಲ್ಲಾ ಕೇಂದ್ರಗಳಲ್ಲಿಯೂ ಇದ್ದರೆ ಮಗುವಿಗೆ ಸದ್ಯೋಮರಣ.

**೬೩. * ಲಗ್ನಾಸ್ತಗೌ ಪಾಪೌ ಚಂದ್ರೋ ಮಿಶ್ರದೃಷ್ಟೋ ಬಾಲಸ್ಯ ಸದ್ಯೋಮೃತಿಃ ||**

ಒಂದು ಪಾಪಗ್ರಹವು ಲಗ್ನದಲ್ಲೂ, ಮತ್ತೊಂದು ಸಪ್ತಮದಲ್ಲೂ ಇದ್ದು, ಚಂದ್ರನನ್ನು ಮಿಶ್ರಗ್ರಹಗಳು ನೋಡಿದರೆ ಮಗುವಿಗೆ ಸದ್ಯೋಮರಣ.

**೬೪. * ಕ್ಷೀಣೇಂದಾವಂತ್ಯೇ ಪಾಪೇಷು ಲಗ್ನಾಷ್ಟಗೇಷು ಕೇಂದ್ರಾಂತರಗೇಷು ಶುಭೇಷು ಬಾಲಸ್ಯ ಸದ್ಯೋಮೃತಿಃ ||**

ಕ್ಷೀಣಚಂದ್ರನು ಲಗ್ನಕ್ಕೆ ೧೨ರಲ್ಲಿದ್ದು, ಪಾಪಗ್ರಹಗಳೆಲ್ಲಾ ಲಗ್ನದಲ್ಲಿಯೂ, ೮ರಲ್ಲಿಯೂ ಇದ್ದು, ಶುಭರು ಕೇಂದ್ರಗಳನ್ನು ಬಿಟ್ಟಿದ್ದರೆ ಮಗುವಿಗೆ ಸದ್ಯೋಮರಣ.

**೬೫. * ಪಾಪಾಂತರೇ ಚಂದ್ರೇ ರಂಧ್ರಾಂಬುಸಪ್ತಮಗೇ ಬಾಲಸ್ಯ ಸದ್ಯೋ-ಮೃತಿಃ ||**

ಪಾಪಮಧ್ಯಗತ ಚಂದ್ರನು ಲಗ್ನಕ್ಕೆ ೮-೪-೭ರಲ್ಲಿದ್ದರೆ ಮಗುವಿಗೆ ಸದ್ಯೋಮರಣ.

**೬೬. * ಸಂಧ್ಯಾಯಾಂ ಭಾಂತ್ಯಗಾಃ ಪಾಪಾ ಇಂದು ಹೋರಾಯಾಂ ಬಾಲಸ್ಯ ಸದ್ಯೋಮೃತಿಃ ||**

ಸಂಧ್ಯಾಕಾಲದಲ್ಲಿ ಇಂದು ಹೋರೆಯಲ್ಲಿ ಜನನವಾಗಿ ಪಾಪಗ್ರಹಗಳೆಲ್ಲವೂ ರಾಶಿಸಂಧಿಗಳಲ್ಲಿದ್ದರೆ ಮಗುವಿಗೆ ಸದ್ಯೋಮರಣ.

೬೭. * ರಂಧ್ರಾಸ್ತಗೌ ಪಾಪೌ ಪಾಪಮಾತ್ರದೃಷ್ಟೌ ಬಾಲಸ್ಯ ಸದ್ಯೋ-ಮೃತಿಃ ॥

ಪಾಪಗ್ರಹಗಳು ೮-೭ರಲ್ಲಿದ್ದು ಪಾಪಿಗಳಿಂದ ಮಾತ್ರ ನೋಡಲ್ಪಡುತ್ತಿದ್ದರೆ ಮಗುವಿಗೆ ಸದ್ಯೋಮರಣ.

೬೮. * ಲಗ್ನಾಂತ್ಯಾಷ್ಟಾಂಕ ಕ್ರಮಾಚ್ಚಂದ್ರಾರಾರ್ಕಮಂದಾ ಬಾಲಸ್ಯ ಸದ್ಯೋ-ಮೃತಿಃ ॥

೧-೧೨-೮-೯ನೆಯ ಮನೆಗಳಲ್ಲಿ ಕ್ರಮವಾಗಿ ಚಂದ್ರ, ಕುಜ, ರವಿ, ಶನಿಗಳಿದ್ದರೂ ಮಗುವಿಗೆ ಸದ್ಯೋಮರಣ.

೬೯. * ಷಷ್ಠ್ಯಾಂ ಜಾತಸ್ಯ ಭೌಮಾರ್ಕಾವಂಗೇ ಮೃತಿಃ ॥

ರವಿ ಕುಜರು ಲಗ್ನದಲ್ಲಿದ್ದರೆ ಮಗುವು ೬೦ ದಿನಗಳಲ್ಲಿ ಮರಣ ಹೊಂದುವುದು.

೭೦. * ಷಷ್ಠಾಷ್ಟಮಗೇ ಚಂದ್ರೇ ಪಾಪವರ್ಗಸ್ಥೇ ತುರ್ಯೇ ರಾಹೌ ಶಿಶು ಮರಣಂ ॥

ಚಂದ್ರನು ೯-೮ರಲ್ಲಿ ಪಾಪಾಂಶದಲ್ಲಿದ್ದು ೪ರಲ್ಲಿ ರಾಹುವಿದ್ದರೆ ಶಿಶುಮರಣ.

೭೧. * ಚಂದ್ರಾದಸ್ತೇ ಭೌಮಾರ್ಕೌ ದಶಾಹೆ ಶಿಶುಮರಣಂ ॥

ಚಂದ್ರನಿಗೆ ೭ರಲ್ಲಿ ರವಿ – ಕುಜರಿದ್ದರೆ, ೧೦ ದಿನಗಳಲ್ಲಿ ಶಿಶುಮರಣ.

೭೨. * ಮಂದಭಗೇ ಜೀವೇಽಷ್ಟಮೇ ಪಾಪೈರ್ದೃಷ್ಟೇ ಏಕಾದಶಾಹೇ ಶಿಶುಮರಣಂ ॥

ಪಾಪವೀಕ್ಷಿತನಾದ ಗುರುವು ಶನಿರಾಶಿಯಲ್ಲಿ ಅಷ್ಟಮದಲ್ಲಿದ್ದರೆ, ಮಗುವು ೧೧ ದಿನಗಳಲ್ಲಿ ಸಾಯುವುದು.

೭೩. * ಮಂದೇಽಗೇ ಪಾಪಮಾತ್ರದೃಷ್ಟೇ ಷೋಡಶಾಹೇ ಶಿಶುಮರಣಂ ॥

ಲಗ್ನದಲ್ಲಿ ಶನಿಯಿದ್ದು ಪಾಪಿಗಳಿಂದ ಮಾತ್ರ ನೋಡಲ್ಪಟ್ಟರೆ ೧೬ ದಿನಗಳಲ್ಲಿ ಶಿಶುಮರಣ.

೭೪. * ಲಗ್ನಾಂಶೇಶೇ ಷಷ್ಠೇ ಷಷ್ಠಭತುಲ್ಯದಿನೇ ಶಿಶುಮರಣಂ ||

ಲಗ್ನ ನವಾಂಶಾಧಿಪತಿಯು ಲಗ್ನಕ್ಕೆ ೬ರಲ್ಲಿದ್ದರೆ ಆ ರಾಶಿಗೆ ಸಮನಾದ ದಿನಗಳಲ್ಲಿ ಶಿಶುಮರಣ.

೭೫. * ಷಷ್ಠಾಷ್ಟಮಗಾಃ ಸೌಮ್ಯಾ ವಕ್ರಗ ಪಾಪದೃಷ್ಟಾ ಮಾಸೇ ಶಿಶು-ಮರಣಂ ||

೬-೮ರಲ್ಲಿ ಶುಭರಿದ್ದು, ಆ ಶುಭವನ್ನು ವಕ್ರಪಾಪಗ್ರಹಗಳು ನೋಡಿದರೆ ೧ ಮಾಸದಲ್ಲಿ ಶಿಶುಮರಣ.

೭೬. * ಸಪಾಪೇಽಂಗೇಶೇ ದ್ಯೂನೇ ಮಾಸೇ ಶಿಶುಮರಣಂ ||

ಲಗ್ನಾಧಿಪತಿಯು ಪಾಪಗ್ರಹದೊಂದಿಗೆ ಸಪ್ತಮದಲ್ಲಿದ್ದರೆ ೧ ಮಾಸದಲ್ಲಿ ಶಿಶುಮರಣ.

೭೭. * ಕುಜೇಽಂಗೇ ಜೀವೇಽಂತ್ಯೇ ಶುಭೇ ಷಷ್ಠೇ ಮಾಸೇ ಶಿಶುಮರಣಂ ||

ಕುಜನು ಲಗ್ನದಲ್ಲಿದ್ದು, ಗುರುವು ೧೨ರಲ್ಲಿದ್ದು, ಒಂದು ಶುಭಗ್ರಹವು ೬ರಲ್ಲಿದ್ದರೆ ೧ ಮಾಸದಲ್ಲಿ ಶಿಶುವಿನ ಮರಣ.

೭೮. * ಸಪಾಪಜನ್ಮೇಶೇ ರಂಧ್ರೇ ಮಾಸೇ ಶಿಶುಮರಣಂ ||

ಲಗ್ನಾಧಿಪತಿಯು ಪಾಪಗ್ರಹದೊಂದಿಗೆ ೮ರಲ್ಲಿದ್ದರೆ, ಒಂದು ಮಾಸದಲ್ಲಿ ಶಿಶುಮರಣ.

೭೯. * ಲಗ್ನಪೇಽಸ್ತೇ ಖಲವಿಜಿತೇ ಮಾಸೇ ಶಿಶುಮರಣಂ ||

ಲಗ್ನಾಧಿಪತಿಯು ಅಸ್ತನಾಗಿದ್ದರೂ, ಯುದ್ಧದಲ್ಲಿ ಸೋತುಹೋಗಿದ್ದರೂ ಮಾಸದಲ್ಲಿ ಶಿಶುಮರಣ.

೮೦. * ಮಂದಾರ್ಕಾರ ರಂಧ್ರೇ ವಾ ಷಷ್ಠೇ ಮಾಸೇ ಶಿಶುಮರಣಂ ||

ಶನಿ, ರವಿ, ಕುಜರು ೮ರಲ್ಲಿಯಾಗಲಿ, ೯ರಲ್ಲಿಯಾಗಲಿ ಇದ್ದರೆ ಅದೇ ಫಲ.

೮೧. * ಗ್ರಹಣೇಽಂಗೇಶೇಽಬಲೇ ಸಪಾಪೇ ಪಕ್ಷತ್ರಯಂ ಮಾಸತ್ರಯಂ ವಾ ಜೀವತಿ ||

ಗ್ರಹಣದಲ್ಲಿ ಜನನವಾಗಿ, ಲಗ್ನಾಧಿಪತಿಯು ಬಲಹೀನನಾಗಿ ಪಾಪ ಗ್ರಹದ ಜೊತೆಯಲ್ಲಿದ್ದರೆ, ಮಗುವು ೩ ಪಕ್ಷಗಳಾಗಲಿ, ೩ ಮಾಸಗಳಾಗಲಿ ಬದುಕಿರುವುದು.

೮೨. * ರಂಧ್ರೇಽಂಗೇಶೇ ಪಾಪಯುತದೃಷ್ಟೇ ತುರ್ಯಮಾ ಸಾಯುಃ ||

ಪಾಪಯುತಿ ಅಥವಾ ವೀಕ್ಷಣೆಯಿಂದ ಕೂಡಿದ ಲಗ್ನಾಧಿಪತಿಯು ಅಷ್ಟಮದಲ್ಲಿದ್ದರೆ ಮಗುವು ೪ ತಿಂಗಳು ಬದುಕಿರುವುದು.

೮೩. * ಸರ್ವೇಽಪೋಕ್ಲಿಮಗಾಃ ವಿಬಲಾಃ ಷಣ್ಮಾಸಾಯುಃ ||

ಎಲ್ಲಾ ಗ್ರಹಗಳೂ ಬಲಹೀನರಾಗಿ ಅಪೋಕ್ಲಿಮಗಳಲ್ಲಿದ್ದರೆ, ಮಗುವಿಗೆ ೬ ತಿಂಗಳು ಆಯುಸ್ಸು.

೮೪. * ಪಾಪಕ್ಷೇತ್ರೇ ಸುತೇ ಇಂದ್ವರ್ಕಾರಾಃ ಷಣ್ಮಾಸಾಯುಃ ||

ಪಂಚಮವು ಪಾಪಕ್ಷೇತ್ರವಾಗಿ ಅಲ್ಲಿ ಚಂದ್ರ – ರವಿ – ಕುಜರಿದ್ದರೆ, ೬ ತಿಂಗಳಾಯುಸ್ಸು.

೮೫. * ಧನಾಂತ್ಯಗಾ ವಾ ವ್ಯಯಾರಿಗಾ ವಾ ರಂಧ್ರಾರಿಗಾ ವಾಽಷ್ಟಮಾಂಕಗಾಃ
ಪಾಪಾಃ ಷಷ್ಠೇಷ್ಟಮೇ ವಾ ಮಾಸಿ ಮೃತಿಃ ||

ಪಾಪಗ್ರಹಗಳು ೨–೧೨; ಅಥವಾ ೧೨–೬; ಅಥವಾ ೮–೬, ಅಥವಾ ೮–೯; ಅಥವಾ ೬–೮; ಈ ಸ್ಥಾನಗಳಲ್ಲಿದ್ದರೆ ಮಗುವು ೧ ತಿಂಗಳು ಬದುಕುತ್ತದೆ.

೮೬. * ಲಗ್ನದ್ರೇಕ್ಕಾಣೇಶೇ ಷಷ್ಠೇಭತುಲ್ಯೇ ಮಾಸಿ ಮೃತಿಃ ||

ಲಗ್ನದ್ರೇಕ್ಕಾಣಾಧಿಪತಿಯು ೬ರಲ್ಲಿದ್ದರೆ ಆ ರಾಶಿಗೆ ಸಮಾನವಾದ ಮಾಸದಲ್ಲಿ ಮರಣ.

೮೭. * ಷಷ್ಠಾಷ್ಟಮಗಯೋಃ ಪಾಪದೃಷ್ಟಯೋಃ ಪಾಪಯೋರ್ವರ್ಷಾಂತರೇ
ಮೃತಿಃ ||

೨ ಗ್ರಹಗಳು ೬–೮ರಲ್ಲಿದ್ದು ಅವರನ್ನು ಪಾಪಗ್ರಹಗಳು ನೋಡಲಿ, ಆ ೬–೮ರಲ್ಲಿರುವ ಗ್ರಹಗಳು ತಾವೇ ಪಾಪಿಗಳಾಗಿರಲಿ, ಮಗುವಿಗೆ ವರ್ಷದ ಒಳಗೆ ಮೃತ್ಯು.

೮೮. * ಚಂದ್ರಜ್ಞೌ ಕೇಂದ್ರೇ ಮೂಢಮಂದಾರದೃಷ್ಟೌ ವರ್ಷಾಂತರೇ ಮೃತಿಃ ||

ಚಂದ್ರ – ಬುಧರು ಕೇಂದ್ರಗಳಲ್ಲಿದ್ದು, ಬಲವಿಲ್ಲದ ಶನಿ – ಕುಜರಿಂದ ನೋಡಲ್ಪಟ್ಟರೆ, ಮಗುವಿಗೆ ವರ್ಷದೊಳಗೆ ಮೃತ್ಯು.

೮೯. * ಲಗ್ನಪಾಚ್ಚಂದ್ರೇಽಂಶೇಽಷ್ಟಮೇ ಪಾಪಮಾತ್ರದೃಷ್ಟೇ ವರ್ಷ-ದ್ವಯಾಯುಃ ||

ಲಗ್ನಾಧಿಪತಿಯಿಂದ ಚಂದ್ರನು ೮ ಅಂಶಗಳಷ್ಟು ದೂರದಲ್ಲಿದ್ದು, ಪಾಪಿಗಳಿಂದ ಮಾತ್ರ ನೋಡಲ್ಪಡುತ್ತಿದ್ದರೆ ಮಗುವು ೨ ವರ್ಷ ಬದುಕುವುದು.

೯೦. * ಕೇಂದ್ರಾಷ್ಟಷಷ್ಠೇ ವಕ್ರಗೇ ಗ್ರಹೇ ಕುಜಭೇ ಸಬಲಾರದೃಷ್ಟೇ ವರ್ಷತ್ರಯಾಯುಃ ||

ವಕ್ರಗ್ರಹವು ಕೇಂದ್ರ ೮–೬ರಲ್ಲಿದ್ದು, ಆ ಸ್ಥಳವು ಅಂಗಾರಕನ ಮನೆಯಾಗಿ, ಬಲಿಷ್ಠನಾದ ಅಂಗಾರಕನಿಂದ ನೋಡಲ್ಪಡುತ್ತಿದ್ದರೆ, ಮಗುವು ೩ ವರ್ಷ ಬದುಕಿರುವುದು.

೯೧. * ಸೋತ್ಥೇ ಪಾಪಾಂಶಗೌ ಪಾಪದೃಷ್ಟೌ ಪುಷ್ಪವಂತೌ ವರ್ಷ-ತ್ರಯಾಯುಃ ||

ರವಿ – ಚಂದ್ರರು ೩ನೆಯ ಮನೆಯಲ್ಲಿ ಪಾಪಾಂಶಗಳಲ್ಲಿದ್ದು, ಪಾಪಗ್ರಹಗಳಿಂದ ನೋಡಲ್ಪಡುತ್ತಿದ್ದರೆ, ಮಗುವು ೩ ವರ್ಷ ಬದುಕಿರುವುದು.

೯೨. * ಭೌಮಭೇಽಷ್ಟಮೇ ಜೀವೇ ಮಂದೇಂದ್ವರ್ಕದೃಷ್ಟೇ ಭೃಗ್ವದೃಷ್ಟೇ ವರ್ಷತ್ರಯಾಯುಃ ||

ಗುರುವು ಅಷ್ಟಮದಲ್ಲಿ ಅಂಗಾರಕನ ಮನೆಯಲ್ಲಿದ್ದು, ಶನಿ – ಚಂದ್ರ-ರವಿಗಳಿಂದ ನೋಡಲ್ಪಡುತ್ತಾ, ಶುಕ್ರವೀಕ್ಷಣೆಯನ್ನು ಹೊಂದದೆ ಇದ್ದರೆ, ಮಗುವು ೩ ವರ್ಷ ಬದುಕಿರುವುದು.

೯೩. * ಷಷ್ಠಾಷ್ಟಮೇ ಕರ್ಕಗೇ ಜ್ಞೇ ಚಂದ್ರದೃಷ್ಟೇ ತುರ್ಯೇಽಬ್ದೇಮೃತಿಃ ||

ಕಟಕವು ೬ ಅಥವಾ ೮ನೆಯ ಮನೆಯಾಗಿ, ಅಲ್ಲಿ ಬುಧನಿದ್ದು, ಆ

ಬುಧನನ್ನು ಚಂದ್ರನು ನೋಡಿದರೆ, ಮಗುವು ೪ನೆಯ ವರ್ಷದಲ್ಲಿ ಮೃತಿ ಹೊಂದುವುದು.

೯೪. * **ಸೇಂದ್ವರ್ಕೇಜೌ ವಾ ಸೇಂದ್ರಶಾರ್ಕ್ಯಾರಾ ವಾ ಸಮಂದೇಂದ್ವಚ್ಛಾರಾಃ ಪಂಚಮಾಬ್ದೇ ಮೃತಿಃ ॥**

(೧) ರವಿ – ಚಂದ್ರ – ಗುರು (೨) ಚಂದ್ರ – ರವಿ – ಶನಿ – ಕುಜ (೩) ಶನಿ – ಚಂದ್ರ – ಶುಕ್ರ – ಕುಜ. ಜಾತಕದಲ್ಲಿ ಗ್ರಹಗತಿಯು ಈ ೩ ವಿಧಾನಗಳಲ್ಲಿ ಯಾವ ಒಂದು ವಿಧದಲ್ಲಿದ್ದರೂ ಮಗು ೫ನೆಯ ವರ್ಷದಲ್ಲಿ ಮೃತಿ ಹೊಂದುವುದು.

೯೫. * **ಲಗ್ನೇ ರಾಹೌ ಪಾಪಮಾತ್ರದೃಷ್ಟಯುತೇ ಪಂಚಮಾಬ್ದೇ ಮೃತಿಃ ॥**

ರಾಹುವು ಲಗ್ನದಲ್ಲಿದ್ದು ಪಾಪಿಗಳಿಂದ ಮಾತ್ರ ಕೂಡಿರಲಿ, ನೋಡಲ್ಪಡಲಿ, ಮಗುವು ೩ನೆಯ ವರ್ಷದಲ್ಲಿ ಮೃತಿ ಹೊಂದುವುದು.

೯೬. * **ಸೂರ್ಯೇಂದುಭೇ ತ್ರಿಕೇ ಶುಕ್ರೇ ಪಾಪದೃಷ್ಟೇ ಷಷ್ಠೇಽಬ್ದೇ ಮೃತಿಃ ॥**

ಶುಕ್ರನು ೬, ೮ ಅಥವಾ ೧೨ರಲ್ಲಿದ್ದು, ಆ ಸ್ಥಾನವು ರವಿಯ ಅಥವಾ ಚಂದ್ರನ ಮನೆಯಾಗಿ, ಪಾಪಗ್ರಹದಿಂದಲೂ ನೋಡಲ್ಪಟ್ಟರೆ, ಮಗುವು ೬ ನೆಯ ವರ್ಷದಲ್ಲಿ ಮೃತಿ ಹೊಂದುವುದು.

೯೭. * **ಲಗ್ನೇಽರ್ಕಮಂದಾರಾಃ ಕ್ಷೀಣೇಂದಾವಸ್ತೇ ಷಷ್ಠೇ ಸಪ್ತಮೇ ವಾಬ್ದೇ ಮೃತಿಃ ॥**

ರವಿ – ಶನಿ – ಕುಜರು ಲಗ್ನದಲ್ಲಿದ್ದು, ಕ್ಷೀಣಚಂದ್ರನು ಸಪ್ತಮ ದಲ್ಲಿದ್ದರೆ, ಮಗುವು ೬ನೆಯ ಅಥವಾ ೭ನೆಯ ವರ್ಷದಲ್ಲಿ ಮೃತಿ ಹೊಂದುವುದು.

೯೮. * **ಕ್ಷೀಣೇಂದಾವಸ್ತೆ ಲಗ್ನೇ ಮಂದಾರಾಭ್ಯಾ ಗುರ್ವದೃಷ್ಟಾಃ ಸಪ್ತಮೇಽಬ್ದೇ ಮೃತಿಃ ॥**

ಕ್ಷೀಣಚಂದ್ರನು ಸಪ್ತಮದಲ್ಲಿದ್ದು, ಲಗ್ನದಲ್ಲಿರುವ ಶನಿ – ಕುಜ –

ಶುಕ್ರರನ್ನು ಗುರುವು ನೋಡದಿದ್ದರೆ, ಮಗುವು ೭ನೆಯ ವರ್ಷದಲ್ಲಿ ಮೃತಿ ಹೊಂದುವುದು.

೯೯. * ಷಷ್ಠಾಷ್ಟಮಗಾಃ ಸೌಮ್ಯಾಃ ಕೋಣೇ ಪಾಪಾ ಅಷ್ಟಮೇಽಬ್ದೇ ಮೃತಿಃ ||

ಶುಭರು ೬–೮ರಲ್ಲಿಯೂ, ಪಾಪಿಗಳು ೫–೯ರಲ್ಲಿಯೂ ಇದ್ದರೆ ಮಗುವು ೮ನೆಯ ವರ್ಷದಲ್ಲಿ ಮೃತಿ ಹೊಂದುವುದು.

೧೦೦. * ಕ್ಷೀಣೇಂದಾವಸ್ತೇ ಶುಕ್ರಭೇ ಲಗ್ನೇ ಮಂದಾರಾರ್ಕಾ ಗುರ್ವದೃಷ್ಟಾಃ ಸಪ್ತಮೇಽಬ್ದೇ ಮೃತಿಃ ||

ಕ್ಷೀಣಚಂದ್ರನು ಸಪ್ತಮದಲ್ಲಿದ್ದು, ಶುಕ್ರನ ಮನೆಯು ಲಗ್ನವಾಗಿ, ಶನಿ – ಕುಜ – ರವಿಗಳಿಗೆ ಗುರುವೀಕ್ಷಣೆಯಿಲ್ಲದಿದ್ದರೆ, ಮಗುವು ೭ನೆಯ ವರ್ಷದಲ್ಲಿ ಮೃತಿ ಹೊಂದುವುದು.

೧೦೧. * ತ್ರಿಕೇ ಚಂದ್ರಾರ್ಕಾರ್ಕಿಯೋಗೇ ನವಮಾಬ್ದೇ ಮೃತಿಃ ||

೬–೮–೧೨ನೆಯ ಸ್ಥಾನದಲ್ಲಿ ಚಂದ್ರ – ರವಿ – ಶನಿಗಳು ಸೇರಿದ್ದರೆ ಮಗುವಿಗೆ ೯ನೆಯ ವರ್ಷದಲ್ಲಿ ಮೃತ್ಯು.

೧೦೨. * ಜ್ಞಭಗಾ ಇಂದ್ವರ್ಕಾರಾ ಗುರ್ವದೃಷ್ಟಾ ನವಮಾಬ್ದೇ ಮೃತಿಃ ||

ಚಂದ್ರ – ರವಿ – ಕುಜರು ಬುಧನ ಮನೆಯಲ್ಲಿದ್ದು ಗುರುವಿನಿಂದ ನೋಡಲ್ಪಡದಿದ್ದರೆ, ೯ನೆಯ ವರ್ಷದಲ್ಲಿ ಮೃತ್ಯು.

೧೦೩. * ದ್ಯೂನೇಽಷ್ಟಮೇಶೇಽಂಗೇ ಮಂದದೃಷ್ಟೇ ನವಮಾಬ್ದೇ ಮೃತಿಃ ||

ಚಂದ್ರನು ೭ರಲ್ಲಿದ್ದು, ಅಷ್ಟಮಾಧಿಪತಿಯು ಶನಿಯಿಂದ ನೋಡಲ್ಪಡುತ್ತಾ ಲಗ್ನದಲ್ಲಿದ್ದರೆ ೯ನೆಯ ವರ್ಷದಲ್ಲಿ ಮೃತ್ಯು.

೧೦೪. * ಚಂದ್ರಾಗೇಶಾವಸ್ತೇ ವಾ ತ್ರಿಕೇ ಭತುಲ್ಯಾಬ್ದೈರ್ಮೃತಿಃ ||

ಲಗ್ನಾಧಿಪತಿಯೂ ಚಂದ್ರನೂ ೭–೬–೮ ಅಥವಾ ೧೨ರಲ್ಲಿದ್ದರೆ ೧೨ ವರ್ಷಗಳಿಗೆ ಮೃತ್ಯು.

೧೦೫. * ಜನ್ಮೇಶಾದ್ರಂಧ್ರಗೌ ಶುಕ್ರಾರ್ಕೌ ವಾ ಲಗ್ನೇಶೇ ಷಷ್ಠೇಭ ತುರಾಬ್ದೇ ಮೃತಿಃ ॥

ಚಂದ್ರ ಲಗ್ನಾಧಿಪತಿಯಿಂದ ಅಷ್ಟಮದಲ್ಲಿ ರವಿ – ಶುಕ್ರರಿದ್ದರೂ, ಲಗ್ನಾಧಿಪತಿಯು ೬ರಲ್ಲಿದ್ದರೂ ೧೨ ವರ್ಷಗಳಿಗೆ ಮೃತ್ಯು.

೧೦೬. * ಚಂದ್ರಾಂಗೇಶೌ ಮಂದಾರ್ಕಯುತೌ ದ್ವಾದಶಾಬ್ದೇ ಮೃತಿಃ ॥

ಚಂದ್ರನೂ ಲಗ್ನಾಧಿಪತಿಯೂ ಶನಿ – ರವಿಗಳಿಂದ ಕೂಡಿದ್ದರೆ ೧೨ನೆಯ ವರ್ಷದಲ್ಲಿ ಮೃತ್ಯು.

೧೦೭. * ಜೀವೇ ಭೌಮಭೇ ಭೌಮೇ ಜೀವಭೇ ವಾ ಸೂರ್ಯೇ ಮಂದಭೇ ಮಂದೇ ಸೂರ್ಯಭೇ ದ್ವಾದಶಾಬ್ದೇ ಮೃತಿಃ ॥

ಜಾತಕದಲ್ಲಿ ಗುರು – ಕುಜ ಪರಿವರ್ತನವಾಗಲಿ ಶನಿ – ರವಿ ಪರಿವರ್ತನವಾಗಲಿ ಇದ್ದರೆ, ೧೨ನೆಯ ವರ್ಷದಲ್ಲಿ ಮೃತ್ಯು.

೧೦೮. * ಕ್ರಮಾನ್ಮೇಷಾದಿಗೋ ವಿಧುರಷ್ಟಮನವಮತ್ರಯೋವಿಂಶದಾವಿಂಶ ಪಂಚಮ ಪ್ರಥಮ ಚತುರ್ಥ ತ್ರಯೋವಿಂಶಾಷ್ಟಾದಶ ವಿಂಶೈಕ ಶಂಶದಶಮಲವಸ್ಥೋಲವಾಂಕಮಿತೇಬ್ದೇ ಮೃತಿಃ ॥

ಚಂದ್ರನು ಕ್ರಮವಾಗಿ ಮೇಷಾದಿ ರಾಶಿಗಳಲ್ಲಿ ೮–೯–೨೩–೨–೨–೫–೧–೪–೨೩–೧೮–೨೦–೨೧ ಮತ್ತು ೧೦ನೆಯ ಭಾಗದಲ್ಲಿದ್ದರೆ ಆಯಾ ವರ್ಷದಲ್ಲಿ ಮೃತ್ಯು.

೧೦೯. * ರಾತ್ರೌ ಷಷ್ಠಾಷ್ಟಮಗಶ್ಚಂದ್ರಃ ಶುಕ್ಲೇ ಸರ್ವಾರಿಷ್ಟ ಹರಃ ॥

ಶುಕ್ಲಪಕ್ಷದಲ್ಲಿ ರಾತ್ರಿ ಜನನವಾಗಿ, ಚಂದ್ರನು ೬ ಅಥವಾ ೮ರಲ್ಲಿದ್ದರೆ, ಸರ್ವಾರಿಷ್ಟ ನಾಶ.

೧೧೦. * ಸೌಮ್ಯಭಾಂಶಗಾಃ ಸೌಮ್ಯಾಃ ಸರ್ವಾರಿಷ್ಟ ಹರಃ ॥

ಶುಭರು ಶುಭರಾಶಿ ಶುಭಾಂಶಗಳಲ್ಲಿದ್ದರೆ ಸರ್ವಾರಿಷ್ಟ ನಾಶ.

೧೧೧. * ಭೇಶೇ ಕೇಂದ್ರೇ ವಾ ಸೌಮ್ಯೇ ಕೇಂದ್ರೇ ಸರ್ವಾರಿಷ್ಟ ಹರಃ ॥

ಕೇಂದ್ರದಲ್ಲಿ ತದಧಿಪತಿಯಾಗಲಿ ಶುಭನಾಗಲಿ ಇದ್ದರೆ ಸರ್ವಾರಿಷ್ಟ ನಾಶ.

೧೧೨. * ಶೀರ್ಷೋದಯಗಾಃ ಸರ್ವೇಸರ್ವಾರಿಷ್ಟ ಹರಃ ||

ಗ್ರಹಗಳೆಲ್ಲಾ ಶೀರ್ಷೋದಯ ರಾಶಿಗಳಲ್ಲಿದ್ದರೆ ಸರ್ವಾರಿಷ್ಟ ನಾಶ.

೧೧೩. * ಷಷ್ಠಾಷ್ಟಮಗೇ ಕೃಷ್ಣೇ ಚಂದ್ರೇ ದಿವಾ ಪಾಪದೃಷ್ಟೇ ಸರ್ವಾರಿಷ್ಟ ಹರಃ ||

ಹಗಲು ಜನನದಲ್ಲಿ, ಕೃಷ್ಣಪಕ್ಷದಲ್ಲಿ, ಚಂದ್ರನು ೬ ಅಥವಾ ೮ರಲ್ಲಿದ್ದು, ಪಾಪಿಗಳಿಂದ ನೋಡಲ್ಪಟ್ಟರೆ ಸರ್ವಾರಿಷ್ಟ ನಾಶ.

೧೧೪. * ಸ್ವೋಚ್ಚ ಸುಹೃದ್ಭೇ ಚಂದ್ರೇ ಸರ್ವಾರಿಷ್ಟ ಹರಃ ||

ಚಂದ್ರನು ಉಚ್ಚ ಅಥವಾ ಮಿತ್ರ ಕ್ಷೇತ್ರದಲ್ಲಿದ್ದರೆ ಸರ್ವಾರಿಷ್ಟ ನಾಶ.

೧೧೫. * ಚಂದ್ರಾತ್ ಖೇ ಜೀವೋ ವ್ಯಯೇ ಜ್ಞಾಚ್ಛೌ ಲಾಭೇಖಲ್ಯಾ ಸರ್ವಾರಿಷ್ಟ ಹರಃ ||

ಗುರುವು ಚಂದ್ರನಿಗೆ ೧೦ರಲ್ಲಿದ್ದು, ಶುಕ್ರ – ಬುಧರು ೧೨ರಲ್ಲಿದ್ದು, ಪಾಪಿಗಳು ೧೧ರಲ್ಲಿದ್ದರೆ, ಎಲ್ಲಾ ಅನಿಷ್ಟಗಳೂ ಪರಿಹಾರವಾಗುತ್ತವೆ.

೧೧೬. * ಕರ್ಕಾಜೇ ಇಂದೌ ಕೇಂದ್ರೇ ಸದ್‌ದೃಷೇ ಸರ್ವಾರಿಷ್ಟ ಹರಃ ||

ಚಂದ್ರನು ಕಟಕದಲ್ಲಿಯಾಗಲಿ ಮೇಷದಲ್ಲಿಯಾಗಲಿ ಇದ್ದು, ಅದು ಲಗ್ನಕ್ಕೆ ಕೇಂದ್ರವಾಗಿ, ಶುಭಗ್ರಹದಿಂದ ನೋಡಲ್ಪಟ್ಟರೆ ಎಲ್ಲಾ ಅನಿಷ್ಟಗಳೂ ಪರಿಹಾರ.

೧೧೭. * ಕರ್ಕಾಜವೃಷೇಽಂಗೇ ರಾಹೌ ಸರ್ವಾರಿಷ್ಟ ಹರಃ ||

ಕಟಕ–ಮೇಷ–ವೃಷಭಗಳಲ್ಲೊಂದು ಲಗ್ನವಾಗಿ, ಅಲ್ಲಿ ರಾಹುವಿದ್ದರೆ ಸರ್ವಾರಿಷ್ಟ ಪರಿಹಾರ.

೧೧೮. * ಕೇಂದ್ರೇ ಚ ಸರ್ವಖೇಟಾಃ ಸರ್ವಾರಿಷ್ಟ ಹರಃ ||

ಸಮಸ್ತ ಗ್ರಹಗಳೂ ಕೇಂದ್ರಗಳಲ್ಲಿಯಾಗಲಿ, ಅದರಿಂದ ಮುಂದೆಯಾಗಲಿ ಇದ್ದರೆ ಸರ್ವಾರಿಷ್ಟ ಪರಿಹಾರ.

೧೧೯. * ಶುಭಭೇ ಪೂರ್ಣೇಂದೌ ಸರ್ವಾರಿಷ್ಟ ಹರಃ ||

ಪೂರ್ಣಚಂದ್ರನು ಶುಭ ರಾಶಿಯಲ್ಲಿದ್ದರೆ ಸರ್ವಾರಿಷ್ಟ ಪರಿಹಾರ.

೧೨೦. * ಷಷ್ಠಾಷ್ಟಮೇ ಚಂದ್ರೇ ಶುಭವರ್ಗಗೇ ಸರ್ವಾರಿಷ್ಟ ಹರಃ ||

ಚಂದ್ರನು ೬ ಅಥವಾ ಆರಲ್ಲಿದ್ದು ಶುಭವರ್ಗದಲ್ಲಿದ್ದರೆ ಸರ್ವಾರಿಷ್ಟ ಪರಿಹಾರ.

೧೨೧. * ಇಂದ್ವಂಗೌ ಸರ್ವಗ್ರಹದೃಷ್ಟೌ ಸರ್ವಾರಿಷ್ಟ ಹರಃ ||

ಚಂದ್ರನೂ ಲಗ್ನವೂ ಎಲ್ಲಾ ಗ್ರಹಗಳಿಂದಲೂ ನೋಡಲ್ಪಟ್ಟರೆ ಸರ್ವಾರಿಷ್ಟ ಪರಿಹಾರ.

೧೨೨. * ಶುಭಾಂಶೇ ಕೇಂದ್ರೇ ಕೋಣೇ ಶುಕ್ರದೃಷ್ಟೇ ಚಂದ್ರೇ ಸರ್ವಾರಿಷ್ಟ ಹರಃ ||

ಚಂದ್ರನು ಕೇಂದ್ರ ಅಥವಾ ಕೋಣದಲ್ಲಿ ಶುಭಾಂಶದಲ್ಲಿದ್ದು, ಶುಕ್ರನಿಂದ ನೋಡಲ್ಪಟ್ಟರೆ ಎಲ್ಲಾ ಅನಿಷ್ಟವೂ ಪರಿಹಾರ.

೧೨೩. * ಬಲೀ ಶುಭಃ ಕೇಂದ್ರಗೋ ಲಾಭೇ ಸೂರ್ಯಃ ಸರ್ವಾರಿಷ್ಟ ಹರಃ ||

ಬಲಿಷ್ಠನಾದ ಶುಭನು ಕೇಂದ್ರದಲ್ಲಿದ್ದು, ರವಿಯು ಲಾಭದಲ್ಲಿದ್ದರೆ ಅದೇ ಫಲ.

೧೨೪. * ಸಬಲೇsಂಗವೇ ಶುಭಮಾತ್ರದೃಷ್ಟೇ ಸರ್ವಾರಿಷ್ಟ ಹರಃ ||

ಲಗ್ನಾಧಿಪತಿಯು ಬಲಿಷ್ಠನಾಗಿ ಶುಭದಿಂದ ಮಾತ್ರ ನೋಡಲ್ಪಟ್ಟರೆ ಅದೇ ಫಲ.

೧೨೫. * ಜೀವೇ ಸ್ವಭೋಚ್ಚಗೇ ಕೇಂದ್ರೇ ಸರ್ವಾರಿಷ್ಟ ಹರಃ ||

ಗುರುವು ಉಚ್ಚದಲ್ಲಿಯಾಗಲಿ, ಸ್ವಕ್ಷೇತ್ರದಲ್ಲಿಯಾಗಲಿ ಕೇಂದ್ರ ದಲ್ಲಿದ್ದರೆ ಅದೇ ಫಲ.

೧೨೬. * ಪಾಪಾಃ ಶುಭವರ್ಗಗಾಃ ಶುಭಮಾತ್ರದೃಷ್ಟಾಃ ಸರ್ವಾರಿಷ್ಟ ಹರಃ ||

ಪಾಪಿಗಳು ಶುಭವರ್ಗಗಳನ್ನು ಹೊಂದಿ ಶುಭರಿಂದ ಮಾತ್ರ ನೋಡಲ್ಪಟ್ಟರೂ ಅದೇ ಫಲ.

೧೨೭. * **ಜಾಯಾರಿಗೋ ರಾಹುಃ ಶುಭಮಾತ್ರಪ್ಪಯುತಃ ಸರ್ವಾರಿಷ್ಟ ಹರಃ ||**

ರಾಹುವು ೬ ಅಥವಾ ೭ರಲ್ಲಿದ್ದು ಶುಭರಿಂದ ಮಾತ್ರ ಕೂಡಿದ್ದರೂ, ನೋಡಲ್ಪಟ್ಟರೂ ಅದೇ ಫಲ.

೧೨೮. * **ಸರ್ವೇ ಬಲಿನೋ ವಾ ನೃರಾಶಿಗಾ ವಾ ಮಿತ್ರಭಗಾ ವಾ ಶುಭಭಗಾ ವಾ ಶುಭವರ್ಗಗಾಃ ಸರ್ವಾರಿಷ್ಟ ಹರಃ ||**

ಗ್ರಹಗಳೆಲ್ಲಾ ಬಲಿಷ್ಠರಾಗಿ ನರರಾಶಿಗಳಲ್ಲಿದ್ದರೂ, ಮಿತ್ರಕ್ಷೇತ್ರ ಗಳಲ್ಲಿದ್ದರೂ, ಶುಭಕ್ಷೇತ್ರ ಶುಭವರ್ಗಗಳಲ್ಲಿದ್ದರೂ ಅದೇ ಫಲ.

೧೨೯. * **ಷಷ್ಠಾಷ್ಟಮೇಶೌ ಚಂದ್ರಾರಯುತೌ ತುರ್ಯಗೌ ಜಾರಜಃ ||**

೬-೮ನೆಯ ಅಧಿಪತಿಗಳು ಚಂದ್ರ - ಕುಜರೊಂದಿಗೆ ಕೂಡಿ ೪ನೆಯ ಮನೆಯಲ್ಲಿದ್ದರೆ, ತಂದೆಗೆ ಹುಟ್ಟಿದ ಮಗುವಲ್ಲ.

೧೩೦. * **ಷಷ್ಠಾಂಕೇಶೌ ಪಾಪಯುತೌ ಜಾರಜಃ ||**

೬-೯ನೆಯ ಮನೆಗಳ ಅಧಿಪತಿಗಳು ಪಾಪಿಗಳೊಂದಿಗೆ ಸೇರಿದ್ದರೆ ಜಾರಜನು.

೧೩೧. * **ಷಷ್ಠಾಂಕೇಶಯೋರ್ಮಂದಯೋಗೇ ಶೂದ್ರಜೋಜ್ಞಯೋಗೇ ವೈಶ್ಯಜೋಽರ್ಕಯೋಗೇ ಕ್ಷತ್ರಜೋ ಜೀವಶುಕ್ರಾನ್ಯತರುಯೋಗೇ ಬ್ರಾಹ್ಮಣಭೋ ಜಾರಜಃ ||**

೬-೯ನೆಯ ಅಧಿಪತಿಗಳು ಶನಿಯೊಂದಿಗೆ ಸೇರಿದ್ದರೆ ಶೂದ್ರನಿಗೆ ಹುಟ್ಟಿದವನೂ, ಬುಧನೊಂದಿಗೆ ಸೇರಿದ್ದರೆ ವೈಶ್ಯನಿಗೆ ಹುಟ್ಟಿದವನೂ, ರವಿಯೊಂದಿಗೆ ಸೇರಿದ್ದರೆ ಕ್ಷತ್ರಿಯನಿಗೆ ಹುಟ್ಟಿದವನೂ, ಗುರು ಅಥವಾ ಶುಕ್ರನೊಂದಿಗೆ ಸೇರಿದ್ದರೆ ಬ್ರಾಹ್ಮಣನಿಗೆ ಹುಟ್ಟಿದವನೂ ಆಗುತ್ತಾನೆ ; ಅಂತೂ ತಂದೆಗೆ ಹುಟ್ಟಿದವನಲ್ಲ.

೧೩೨. * **ಅಂಶೇ ಪಾಪಮಾತ್ರ ಸಂಬಂಧೇ ಜಾರಜಃ ||**

ಆತ್ಮಕಾರಕನ ನವಾಂಶಕ್ಕೆ ಪಾಪಿಗಳ ಸಂಬಂಧ ಮಾತ್ರವಿದ್ದರೂ ಜಾರಜನು.

೧೩೩. * **ಕೇಂದ್ರೇ ಸೋತ್ಥೇಶಯೋಗೇ ಜಾರಜಃ ॥**

ತೃತೀಯಾಧಿಪತಿಯು ಕೇಂದ್ರದಲ್ಲಿದ್ದರೆ ಜಾರಜನು.

೧೩೪. * **ದ್ವಿತ್ರಿಪಂಚಾರೀಶಾ ಲಗ್ನಗಾ ಜಾರಜಃ ॥**

೨-೩-೫ ಮತ್ತು ೬ನೆಯ ಮನೆಯ ಅಧಿಪತಿಗಳು ಲಗ್ನದಲ್ಲಿದ್ದರೆ, ಅದೇ ಫಲ.

೧೩೫. * **ಪಾಪೇಽಂಗೇ ಶುಭೇ ದ್ಯೂನೇ ಖೇ ಮಂದೇ ಜಾರಜಃ ॥**

ಲಗ್ನದಲ್ಲಿ ಪಾಪಿ, ೭ರಲ್ಲಿ ಶುಭ ಮತ್ತು ೧೦ರಲ್ಲಿ ಶನಿಯಿದ್ದರೆ ಜಾರಜನು.

೧೩೬. * **ಚಂದ್ರೇಽಂಗೇ ಸುತೇ ಶುಕ್ರೇ ಸೋತ್ಥೇ ಭೌಮೇಜಾರಜಃ ॥**

ಚಂದ್ರ, ಶುಕ್ರ, ಕುಜರು ಕ್ರಮವಾಗಿ ೧, ೫, ೩ರಲ್ಲಿದ್ದರೂ ಜಾರಜನು.

೧೩೭. * **ಲಗ್ನೇಽರ್ಕೇ ಸುಖೇರಾಹೌ ಪಿತೃವ್ಯಜಃ ॥**

ಲಗ್ನದಲ್ಲಿ ಸೂರ್ಯನೂ, ೪ರಲ್ಲಿ ರಾಹುವೂ ಇದ್ದರೆ ಚಿಕ್ಕಪ್ಪನಿಗೆ ಹುಟ್ಟಿದವನು.

೧೩೮. * **ಲಗ್ನೇ ರಾಹ್ವಾರೌ ಪುಷ್ಪವಂತೌ ದ್ಯೂನೇ ನೀಚಜಃ ॥**

ಲಗ್ನದಲ್ಲಿ ಕುಜ - ರಾಹುಗಳು, ಸಪ್ತಮದಲ್ಲಿ ರವಿ - ಚಂದ್ರರೂ ಇದ್ದರೆ ನೀಚನಿಗೆ ಹುಟ್ಟಿದವನು.

೧೩೯. * **ಶೂನ್ಯೇಷು ಕೇಂದ್ರೇಷು ಜಾರಜಃ ॥**

ಕೇಂದ್ರಗಳಲ್ಲಿ ಗ್ರಹಗಳಿಲ್ಲದಿದ್ದರೆ ಜಾರಜನು.

೧೪೦. * **ಸರ್ವೇ ದ್ವಿಷಷ್ಠಾಷ್ಟಾಂತ್ಯೇಷು ಜಾರಜಃ ॥**

ಸಮಸ್ತ ಗ್ರಹಗಳೂ ೨, ೬, ೮ ಮತ್ತು ೧೨ನೆಯ ಕಡೆಗಳಲ್ಲಿದ್ದರೆ ಜಾರಜನು.

೧೪೧. * **ದೇವವರ್ಗಹೀನೇಽಂಗೇ ಜಾರಜಃ ॥**

ಲಗ್ನಕ್ಕೆ ಗುರುವರ್ಗ ಸಂಬಂಧವಿಲ್ಲದಿದ್ದರೆ ಜಾರಜನು.

೧೪೨. * **ಖೇಽಂಗೇ ತುರ್ಯೇ ಸಪಾಪ ಚಂದ್ರೇ ಚಂದ್ರಲಗ್ನೌ ಗುರ್ವದೃಷ್ಟೌ ಜಾರಜಃ ॥**

ಚಂದ್ರನು ಪಾಪಗ್ರಹದೊಂದಿಗೆ ೧೦, ೧ ಅಥವಾ ೪ನೆಯ ಕಡೆಯಿದ್ದು, ಚಂದ್ರನಿಗೂ ಲಗ್ನಕ್ಕೂ ಗುರುದೃಷ್ಟಿಯಿಲ್ಲದಿದ್ದರೆ ಜಾರಜನು.

**೧೪೩. * ಪುಷ್ಪವಂತಾವೇಕಭಗೌ ಗುರ್ವದೃಷ್ಟೌ ಜಾರಜಃ ||**

ರವಿ - ಚಂದ್ರರು ಒಂದೇ ಕಡೆಯಿದ್ದು, ಗುರುದೃಷ್ಟಿ ರಹಿತರಾಗಿದ್ದರೆ ಜಾರಜನು.

**೧೪೪. * ಲಗ್ನಾಂಬುಷಷ್ಠಧರ್ಮಪಯೋಗೇ ಜಾರಜಃ ||**

೧, ೪, ೬, ೯ನೆಯ ಮನೆಯ ಅಧಿಪತಿಗಳು ಒಂದೇ ಕಡೆಯಿದ್ದರೆ ಜಾರಜನು.

**೧೪೫. * ಧರ್ಮೇ ಸುಖೇ ಚ ಪಾಪೇಽಂಗಪೇಽಬಲೇ ಜಾರಜಃ ||**

೯, ೪ನೆಯ ಕಡೆಗಳಲ್ಲಿ ಪಾಪಿಗಳಿದ್ದು, ಲಗ್ನಾಧಿಪತಿಯು ಬಲಹೀನನಾಗಿದ್ದರೆ ಜಾರಜನು.

**೧೪೬. * ಸುಖೇ ಪಾಪಾಂತರೇ ಲಗ್ನಪೇಽಬಲೇ ಪಾಪದೃಷ್ಟೇ ಜಾರಜಃ ||**

೪ನೆಯ ಮನೆಯು ಪಾಪಮಧ್ಯಗತವಾಗಿ, ಬಲವಿಲ್ಲದ ಲಗ್ನಾಧಿಪತಿಯನ್ನು ಪಾಪಿಗಳು ನೋಡಿದರೆ ಜಾರಜನು.

**೧೪೭. * ದಾರೇಶೇ ಧನೇ ಸಪಾಪೇ ಭೌಮದೃಷ್ಟೇ ಜಾರಜಃ ||**

ಸಪ್ತಮಾಧಿಪತಿಯು ಪಾಪಗ್ರಹದೊಂದಿಗೆ ೨ರಲ್ಲಿದ್ದು, ಅಂಗಾರಕನಿಂದ ನೋಡಲ್ಪಟ್ಟರೆ ಜಾರಜನು.

**೧೪೮. * ಚಂದ್ರಮಂದಯೋಗೇ ಜಾರಜಃ ||**

ಶನಿ - ಚಂದ್ರಯೋಗವಿದ್ದರೆ ಜಾರಜನು.

**೧೪೯. * ಲಗ್ನಪೇಽಂಗೇ ವಾ ಲಗ್ನದೃಷ್ಟರಿ ಜಾರಜಯೋಗೇ ಭಂಗಃ ||**

ಲಗ್ನಾಧಿಪತಿಯು ಲಗ್ನವನ್ನು ನೋಡಿದರೂ, ಲಗ್ನದಲ್ಲಿದ್ದರೂ ಜಾರಜ ಯೋಗ ಭಂಗ.

**೧೫೦. * ಲಗ್ನೇ ಜೀವಯುತದೃಷ್ಟೇ ಜಾರಜಯೋಗೇ ಭಂಗಃ ||**

